# ಕಾವ್ಯಕಲಾಪಿ





ಗು. ಹು. ಹನ್ನೆರಡಮಠ

ಪ್ರಿ ಯುನಿವ್ಹರ್ಸಿಟಿ ಕೋರ್ಸ

( ಬೆಲೆ: ಹತ್ತು ಆಣೆ

# ಕಾವ್ಯಕಲಾಪಿ



ಗು. ಹು. ಹನ್ನೆರಡಮಠ

ಪ್ರಿ ಯುನಿವ್ಹರ್ಸಿಟಿ ಕೋರ್ಸ

ಬೆಲೆ: ಹತ್ತು ಆಣೆ

## ಆಶೀರ್ವಚನ,

ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು
ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ ಅವರು

# ದಯಪಾಲಿಸಿದ ಆಶೀರ್ವಚನ

ಕಾವ್ಯಯೋಮದಲ್ಲಿ ನವಿಲು ಗರಿಗೆದರಿ ಕುಣಿಯುವಾಗ ಯಾರಿಗೆ ಆನಂದವಾಗಲಿಕ್ಕಿಲ್ಲ? ವೈವಿಧ್ಯಮಯವಾದ ಬಣ್ಣದ ಬೆಡಗು ಬಿನ್ನಾಣಗಳು ಎಲ್ಲರನ್ನೂ ಆಕರ್ಷಿಸಬಲ್ಲವು. ಅಂತೆಯೇ ಕನ್ನಡ ಸಾಹಿತ್ಯಾಗಸದಲ್ಲಿ ''ಕಾವ್ಯಕಲಾಪಿ'' ಗರಿಗೆದರಿ ಕುಣಿಯಲು ಸಿದ್ಧವಾಗಿದೆ. ಅದನ್ನು ಕನ್ನಡ ಸಹೃದಯರು ಆನಂದದಿಂದ ಬರಮಾಡಿಕೊಳ್ಳುವರೆಂದು ಆಶಿಸಲಾಗಿದೆ.

ಈ ಕವನ ಸಂಗ್ರಹವನ್ನು ತರುತ್ತಿರುವ ಶ್ರೀ **ಹನ್ನೆರಡುಮಠ** ಅವರು ತರುಣರು, ಉತ್ಸಾಹಿಗಳು. ಆ ತಾರುಣ್ಯದ ಉತ್ಸಾಹವನ್ನು ಪ್ರತಿಭೆಯ ಹೊನಲಿನಿಂದ ಹರಿಬಿಡುವ ಯತ್ನ ಮಾಡಿರುವರು. ಅವರೇ ಹೇಳುವಂತೆ,

''ಒಸರಿ ಕೊಸರಿ ಕಸುವಿನಿಂದ ಹಾರಲೆನ್ನ ಜೀವನ
ಕಸಕು ಮುಸಕು ದೂರ ಸರಿಸಿ ಅಳಿಯಲೆನ್ನ ಬಂಧನ"
ಎಂಬ ಧ್ಯೇಯ
"ಅರಿಯೆ ನಾನು ದಾರಿ ತೋರೋ ಗುರುವರ"
ಎಂಬ ಹಾರೈಸುವದು.

"ಸೈಜ ಶಿಲ್ಪಿ ಸತ್ಯ ಕಲ್ಪಿ ನಿಜಾತ್ಮರಕ್ಷಿ
ನಿತ್ಯ ಶಿವನು ಸತ್ವಪೂರ್ಣನು"
ಆವ ಪರಮಾತ್ಮನ ಕಾರುಣ್ಯವನ್ನು ಬೇಡಬಯಸಿದೆ.

ಈ ಸಂಗ್ರಹದಲ್ಲಿ ಬಂದ ಕವನಗಳೆಲ್ಲ ಸ್ವಯಂಪೂರ್ಣವಾಗಿವೆಂದು ಹೇಳಲಿಕ್ಕೆ ಬರುವದಾಗಿಲ್ಲವಾದರೂ, ಕೆಲವು ಸತ್ವಪೂರ್ಣವಾಗಿ ಬಂದಿವೆ.

ಹಣ್ಣಿನ ಗುಣ ಹೀಚಿನಲ್ಲಿ ನೋಡು ಎಂದಾಕ್ಷಣ ಹೀಚಿನಲ್ಲಿ ಹಣ್ಣಿನ ಮಾಧುರ್ಯವು ಅಡಗಿದೆಯೆಂದು ಅರ್ಥವಿಸಬಹುದಲ್ಲವೇ? ಆದರೂ ಆ ಕಾಯಿ ಮಾಗಿ, ಉದುರಿ ಬಿದ್ದು ಪಕ್ವ ಫಲವಾಗುವವರೆಗೆ ಆ ಮಾಧುರ್ಯವನ್ನು ಸವಿಯುವ ರುಚಿಗಾರನು ತಡೆಯಬೇಕಾಗುವದು. ಅಂತೆಯೇ ಆ ಹೀಚು ಹಣ್ಣಾಗುವ ಸಿದ್ಧತೆಗಳನ್ನೆಲ್ಲಾ ಮಾಡಿಕೊಳ್ಳಬೇಕಾಗುವದು ಎಂಬುದು ಸುಸ್ಪಷ್ಟವಾಗಿದೆ. "ಕಾವ್ಯಕಲಾಪ" ಈ ದೃಷ್ಟಿಯಿಂದ ಬೆಳೆದು ಬರುವ ಪಾಡುಗಾಯಿ.

ಶ್ರೀ ಹನ್ನೆರಡುಮಠರ ಕಾವ್ಯಶಕ್ತಿ ಚಿಗುರಿದೆ, ಹೂ-ಕಾಯಿ ಬಿಟ್ಟಿದೆ ಈ ಮಿಡಿ ಹಣ್ಣಾಗಲು ದೇವರ ಒಲುಮೆ ಇರಲಿ, ಎಂದು ಅಂತಃ-ಕರುಣಪೂರ್ವಕ ಆಶಿಸಲಾಗಿದೆ. ಜನಮನ ಅವರ ಕೃತಿಗಳನ್ನು ತೆರೆದ ಹೃದಯದಿಂದ ಬರಮಾಡಿಕೊಂಡು ಪ್ರೋತ್ಸಾಹಿಸಲಿ.

ಇತಿ ಭದ್ರಂ ಶುಭಂ ಮಂಗಲಂ.

**ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು**
**ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾ**
**ಸ್ವಾಮಿಗಳವರು. ಮೂರುಸಾವಿರಮಠ,**
(ಕಾವ್ಯತೀರ್ಥ, ಸಾಹಿತ್ಯರತ್ನ, ವೇದಾಂತಾಚಾರ್ಯ)

# ಮುನ್ನುಡಿ

ನಾಡಿನ ಬನವಲ್ಲಿ ಕಲಾಪಿಯಾಗಲು ತರುಣ ಭಾವಜೀವಿಗಳು ಬಯಸಿದರೆ ಅದು ಸ್ವಾಭಾವಿಕ. ಕಾವ್ಯಕಲಾಪಿಗೆ ಮೊದಲನುಡಿಯನ್ನು ಬರೆಯಲು ಕೇಳಿದ ಶ್ರೀ ಹನ್ನೆರಡಮಠ ಅವರು ಇಂಥ ತರುಣ ಉತ್ಸಾಹ ಜೀವಿಗಳಲ್ಲಿ ಒಬ್ಬರು. ತರುಣರು ಉತ್ಸಾಹ ಜೀವಿಗಳು. ನವಿಲು ಉತ್ಸಾಹ ಮಯ ಪಕ್ಷಿ. ಆದುದರಿಂದ ಉತ್ಸಾಹಕ್ಕೆ ತಕ್ಕ ಹೆಸರನ್ನು ಶ್ರೀ ಹನ್ನೆರಡಮಠರವರು ಈ ಕವನಸಂಗ್ರಹಕ್ಕೆ ಇಟ್ಟಿದ್ದಾರೆ ಅಲ್ಲದೆ 'ಕಾವ್ಯಕಲಾಪಿ, ಎಂಬ ಹೆಸರು ಯಾವುದೇ ಕವನ ಸಂಗ್ರಹಕ್ಕೆ ಒಪ್ಪಬಲ್ಲ ಹೆಸರು.

ಕಾವ್ಯಕಲಾಪಿಗೆ ಮುನ್ನುಡಿ ಬರೆಯುವದರಲ್ಲಿ ನನಗೆ ಇನ್ನೊಂದು ಸಂತೋಷ ಇದೆ. ಏಕೆಂದರೆ ಕಾವ್ಯಕಲಾಪಿಯನ್ನು ರೇಖಿಸಿದ ಶ್ರೀ ಹನ್ನೆರಡಮಠ ಅವರು ನಮ್ಮ ಕಾಲೇಜಿನಲ್ಲಿ ಓದುತ್ತಿರುವ ವಿದ್ಯಾರ್ಥಿ. ಅವರ ಈ ಕವಿತೆಗಳಲ್ಲಿ ಭಾವದ ಕಾವು ಇದೆ. ಭಾಷೆ ಭಾವಕ್ಕೆ ಅಳವಡುವ ದಾರಿಯಲ್ಲಿ ಇವೆ. ಕಾವ್ಯದ ಜೀವಭಾವ– 'ಕಾವ್ಯಕಲಾಪಿ' 'ಆಚೆಗಿನ ಕೂಗು' 'ಸೃಷ್ಟಿ ಚಿಮ್ಮಿದೆ' 'ಶ್ರೀ ಕಾಡಸಿದ್ಧೇಶ್ವರ' 'ಚೆಲುವ ಬುಗ್ಗೆ' 'ಹಾರಲಿಹೃದಯ' 'ಸದ್ಗುರುವಿಗೆ' 'ಓ ಮಾಯ ಬಿನ್ನಾಣ!'–ಇವೇ ಮೊದಲಾದ ಕವನಗಳಲ್ಲಿ ತರುಣ ಕವಿಯ ನೂತನ ಭಾವ ಮೂಡಿನಿಂತಿದೆ. ಕೆಲವು ಕವಿತೆಗಳಲ್ಲಂತೂ ಅದು ತುಂಬಿ ಬಂದಿದೆ. ಭಾವವು ತನ್ನನ್ನು ತಾನೇ ವ್ಯಕ್ತ ಮಾಡುವ ಹಂಬಲ ಇಲ್ಲಿ ಇದೆ. ಹಂಬಲವಿದ್ದಲ್ಲಿ ಹವಣ ತಾನಾಗಿಯೇ ಬಂದೀತು!

ಛಂದಸ್ಸು ಕಾವ್ಯದ ನಾಡಿಯ ಸ್ಪಂದನ ಇದ್ದ ಹಾಗೆ. ಸಹಜ ಕಾವ್ಯದಲ್ಲಿ ಛಂದಸ್ಸು ಸಹಜವಾಗಿ ಸ್ಪಂದಿಸುತ್ತದೆ ಕವಿಯ ಹೃದಯಕ್ಕೆ ಸಾಕಷ್ಟು ಸಂಸ್ಕಾರ ಉಂಟಾದಾಗ ಇಂತಹ ಸ್ಪಂದನ ಸಾಧ್ಯವಾಗುತ್ತದೆ ಇಂತಹ ಸಂಸ್ಕಾರಕ್ಕೆ ಸದ್ಭಾವಜೀವಿಗಳ ಸಂಪರ್ಕ ನೆರವಾಗುತ್ತದೆ. ಇವಕ್ಕೆ ಸುಯೋಗ ಬೇಕು, ಕಾಲ ಬೇಕು, ಪೂರ್ವ ಪ್ರಕೃತಿಯಂತೂ ಬೇಕೆಬೇಕು. ಇಂತಹ ಪ್ರಕೃತಿ ಕಾವ್ಯಕಲಾಪಿಯಲ್ಲಿ ಕಾಣುತ್ತದೆ. ಕಾವ್ಯಗಳ ಸಂಪರ್ಕ ಪರಿಣಾಮವಾಗಿ ಶ್ರೀ ಹನ್ನೆರಡಮಠರವರ ಹೃದಯವು ಇನ್ನೂ ಬಂಧುರವಾದ ಛಂದೋಗತಿಯಲ್ಲಿ ಮಿಡಿಯಬಹುದಾದ ನಂಬಿಕೆ ಅವರ ಕವನಗಳಲ್ಲಿ ಅಲ್ಲಲ್ಲಿ ಮೂಡಿದೆ.

ಕಾವ್ಯಕಲಾಪಿಯು ಮೊದಲನೆಯ ಕವಿತೆಯಾದ ಕಾವ್ಯಕಲಾಪಿಯಲ್ಲಿ ಕವಿಯ ಉತ್ಸಾಹ ಉಕ್ಕಿದೆ. ಶೈಲಿ ಉತ್ಸಾಹಕ್ಕೆ ಹೊಂದಿಕೆಯಾಗಿದೆ. ಅದಕ್ಕಾಗಿ ಬಳಿಕೆಯಾದ ಉತ್ಸಾಹಲಯದಲ್ಲಿ ಔಚಿತ್ಯವಿದೆ. ತನ್ನ ಬಾಳನ್ನು ಒಂದು ಬನವನ್ನಾಗಿಸಬೇಕೆಂಬ ಹಂಬಲವು ಅದರಲ್ಲಿ ತುಂಬಿ ತುಳುಕಿದೆ. ಸೃಷ್ಟಿಸೌಂದರ್ಯವೇ ಒಂದು ಹೂದೋಟ. ಅದರಲ್ಲಿ ಭ್ರಮಿಸುವ ಭ್ರಮರನಾಗಬೇಕೆಂದಿದ್ದಾನೆ ಕವಿ. ಚೆಲುವಿನ ಬಗೆಗೆ ಕವಿಯಲ್ಲಿ ಇರುವ ಒಲವು 'ಚೆಲುವ ಬುಗ್ಗೆ' ಎಂಬ ಕವಿತೆಯಲ್ಲಿ ಪಡಿಮೂಡಿದೆ. ಸೃಷ್ಟಿಸೌಂದರ್ಯವು ಹೆಚ್ಚಾಗಿ ಮಳೆಯ ರೂಪದಲ್ಲಿ ಕವಿಯ ದೃಷ್ಟಿಯನ್ನು ತೆರೆದಂತಿದೆ. 'ವೃಷ್ಟಿಕಾಲ' ಮತ್ತು "ಮಳೆ" ಈ ಕವಿತೆಗಳಲ್ಲಿ ಕೌತುಕವೂ ಕಲ್ಪನೆಯೂ ಸ್ಪಷ್ಟವಾಗಿ ವ್ಯಕ್ತವಾಗಿವೆ. ಮಳೆಯಿಂದಾಗಿ "ಸುತ್ತ ಸೃಷ್ಟಿ ಚೆಲುವನೆತ್ತಿ ಜಗವ ಬೆರಗುಗೊಳಿಸಿತು" ಎಂಬ ಚರಣದಲ್ಲಿ ಸೌಂದರ್ಯವೃಷ್ಟಿಯನ್ನು ಕಾಣಬಹುದು. 'ಮಳೆ' ಎಂಬ ಕವನದಲ್ಲಿ ಕಲ್ಪನೆಯ ನಾವಿಣ್ಯ ಕಾಣುತ್ತದೆ. ಮಳೆಯಾದಾಗ,

" ಗಾಳಿ ಓಡಿ ಜಗದೊಳಾಡಿ ಈಜು ಬಿದ್ದಿತು. "

ಎಂದು ಕವಿಯು ಹಾಡಿದ್ದಾನೆ. 'ಮಲ್ಲಾಡದೈಸಿರಿ' ಎಂಬ ಕವನವು ಕವಿಯ ಸೌಂದರ್ಯ ಅನುಭವಕ್ಕೆ ಸಾಕ್ಷಿಯಾಗಿದೆ. 'ಧೂಳಿಯ ಕಣ' 'ಕೆಂಡದ ಚೆಂಡು' 'ಜೀವನ ಗಾಡಿ' 'ಅಡುಗೆಯ ಮನೆಯ ನಾಟ್ಯ' 'ತಗಣಿ

ಗಳೊಡನೆ ಮಹಾಯುದ್ಧ' -ಈ ಕವಿತೆಗಳಲ್ಲಿ ಹೊಸತನವು ಎದ್ದು ತೋರಿದೆ. ಗಾಳಿಯಲಿ ಹಾರಿ ಗೋಡೆಯನ್ನು ಹಾಯುವ ಧೂಳಿಯ ಕಣಗಳನ್ನು "ನೋವಾಗದೇ ನಿಮಗೆ ?" ಎಂದು ಕೇಳುವಲ್ಲಿ 'ಹೊಸತನವೂ ಇದೆ' ಸಹಾನುಭೂತಿಯೂ ಇದೆ. ಅದೇರೀತಿಯಾಗಿ,

" ಹಂಚಿನೆಣ್ಣೆಯ ಕೆರೆಯಲಿ ಜಿಕ್ಕುಲಿಯ ಈಸಾಟ !
ಕಂಡ ಬಾಯ್ಗಳಲ್ಲಿ ಕುಣಿದಾಟ !!"

ಇಂಥ ಚರಣಗಳಲ್ಲಿ ಹೊಸ ಹೋಲಿಕೆಗಳು ಕಣ್ಣಿಗೆ ಬೀಳುತ್ತವೆ. 'ಮಿಣುಕುದೀವಿಗೆಯಾದರೇನು?' 'ಶರಣಪಥ' 'ನ್ಯಾಯನೋಂಪಿ' 'ಸೌಂದರ್ಯಸ್ವರ್ಗ!' 'ಹಾರಲಿ ಹೃದಯ' -ಇವೇ ಮೊದಲಾದ ಕವಿತೆಗಳು ಆಳವಾದ ಭಾವವನ್ನು ವ್ಯಕ್ತಮಾಡುತ್ತವೆ. ಇದೇ ಮೊದಲಸಲ ಕವನಗಳನ್ನು ಪ್ರಕಟಿಸಲು ಹೊರಟ ತರುಣ ಕವಿಯ ಕವಿತೆಗಳು ಬೇಗನೆ ರಸಾನುಭವದ ಕವಿತೆಗಳಾಗಿ ಪರಿಣಮಿಸಬಲ್ಲವೆಂಬುದಕ್ಕೆ ಇಂಥ ಕವಿತೆಗಳಲ್ಲಿ ಸೂಚನೆಯುಂಟು. 'ಸದ್ಗುರುವಿಗೆ' 'ಅರಿದೆನುನಿನ್ನ' 'ಕಂಡೆನಿನ್ನ' 'ಆಚೆಗಿನ ಕೂಗು' ಮೊದಲಾದವುಗಳು ಅನುಭವಪದಗಳ ರೀತಿಯ ಒಳ್ಳೆಯ ಕವಿತೆಗಳಾಗಿವೆ. ಅವುಗಳಲ್ಲಿ ಶೈಲಿಯು ನಿರರ್ಗಳವಾಗಿ ಪ್ರವಹಿಸಿದೆ. 'ಹಿತೋಕ್ತಿಗಳು' ಎಂಬ ಕವನದಲ್ಲಿ ನಿಜವಾಗಿಯೂ ಹಿತೋಕ್ತಿಗಳಿವೆ.

ಒಟ್ಟಾಗಿ ವಿಷಯದಲ್ಲಿ ವೈವಿಧ್ಯ, ಛಂದಸ್ಸಿನಲ್ಲಿ ವಿವಿಧತೆ ಹನ್ನೆರಡ ಮತರವರ ಕವಿತೆಗಳಲ್ಲಿ ತೋರಿಬರುತ್ತದೆ. ಅನುಭವವನ್ನೂ ಅಭ್ಯಾಸವನ್ನೂ ಬೆಳೆಯಿಸಿಕೊಂಡು ಹೋದರೆ ಕವಿತೆಗಳು ಬೇಗನೆ ಎಲ್ಲರ ಮೆಚ್ಚುಗೆಗೆ ಪಾತ್ರವಾಗುವದರಲ್ಲಿ ಸಂದೇಹವಿಲ್ಲ. ಜೀವ ತುಂಬಿದ, ಭಾವ ತುಂಬಿದ, ರಸ ತುಂಬಿದ ಕವಿತೆಗಳನ್ನು ಅವರು ಹೆಚ್ಚುಹೆಚ್ಚಾಗಿ ರಚಿಸುವಂತೆ ಪರಮಾತ್ಮನ ಅನುಗ್ರಹವಾಗಲಿ ಎಂದು ಹಾರೈಸುತ್ತೇನೆ.

ಶ್ರೀ ಕಾಡಸಿದ್ಧೇಶ್ವರ ಕಾಲೇಜ,
ಹುಬ್ಬಳ್ಳಿ.
ದಿನಾಂಕ, ೧೧-೩-೧೯೫೮.

ಡಾ|| **ಡಿ. ಎಸ್. ಕರ್ಕಿ,**
ಎಂ. ಎ., ಪಿಎಚ್. ಡಿ.
ಪ್ರಿನ್ಸಿಪಾಲರು.

# ನನ್ನ ನುಡಿ

ನನ್ನ ಅಂತರಂಗದ ಭಾವವೀಣೆ ಮಿಡಿದು, ಕಾವ್ಯನಾಡಿ ನುಡಿದು **ಕಾವ್ಯಕಲಾಪಿ** ಯಾಗಿ, ರಸಿಕತೆಯು ತುಂಬಿ, ಉತ್ಸಾಹಗರಿಗಳನ್ನು ಚಿಮ್ಮಿ ಕುಣಿಯಿತು ಸುರಿಯುತ್ತಿರುವ ವರ್ಷಾಧಾರೆಯಿಂದ ನವಿಲು ನವಿರೆದ್ದು ಕೇಕಾರವದಿಂದ ಕುಣಿಯುವಂತೆ, ಭವ್ಯವಾದ ಸೃಷ್ಟಿಮಾತೆಯ ಸೌಂದರ್ಯವೃಷ್ಟಿಯು ನನ್ನಂತರಂಗದಲ್ಲಿ ಆನಂದಬುಗ್ಗೆಯಾಗಿ ಹೊಮ್ಮಿತು. ಸೃಷ್ಟಿಮಾತೆಯ ಚೆಲುವಿನಂಗಳದಲ್ಲಿ ಮೈಯುಬ್ಬಿ ಕುಣಿಯುವದೇ **ಕಾವ್ಯಕಲಾಪಿ!** ರಸಿಕ ಹೃದಯಿಗಳು ಕಾವ್ಯಕಲಾಪಿಯನ್ನು ಸಾದರದಿಂದ ಸ್ವಾಗತಿಸುವರೆಂದು ಆಸಿಸಲಾಗಿದೆ.

'ಕಾವ್ಯಕಲಾಪಿ' ಗೆ ಪರಮ ಪೂಜ್ಯರಾದ **ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿ**ಗಳವರು ಅಂತಃಕರುಣದಿಂದ ಆಶೀರ್ವಚನವನ್ನಿತ್ತು ಆಶೀರ್ವದಿಸಿದುದಕ್ಕಾಗಿ ನಾನು ಧನ್ಯನೆಂದು ಭಾವಿಸುತ್ತೇನೆ. ಅದರಂತೆ ನನ್ನ ಗುರುಗಳೂ ನಮ್ಮ ಕಾಲೇಜಿನ ಪ್ರಿನ್ಸಿಪಾಲರೂ ಹಾಗೂ ನಮ್ಮ ನಾಡಿನ ಹಿರಿಯ ಕವಿಗಳೂ ಆದ **ಡಾ|| ಡಿ. ಎಸ್. ಕರ್ಕಿ**ಯವರು ತಮ್ಮೆಲ್ಲ ಕೆಲಸಗಳನ್ನು ಬದಿಗಿರಿಸಿ, ಸಾದರಪೂರ್ವಕವಾಗಿ ಸಕಾಲಕ್ಕೆ ಮುನ್ನುಡಿಯನ್ನು

ಬರೆದು ಅನುಗ್ರಹಿಸಿದ್ದಕ್ಕೆ ನಾನು ಅವರಿಗೆ ಚಿರಋಣಿಯಾಗಿದ್ದೇನೆ. ನಮ್ಮ ಕಾಲೇಜಿನ ನನ್ನ ಪ್ರೀತಿಯ ಗುರುಗಳಾದ ಪ್ರೊ. **ಎಸ್. ಸಿ. ಹೊಗರ್ತಿ**ಯವರು ಕಾವ್ಯಕಲಾಪಿಯ ದರ್ಶನವನ್ನು ಆಳವಾದ ಅಭ್ಯಾಸ ಬಲದಿಂದ ಇತ್ತಿದ್ದಕ್ಕಾಗಿ ನನ್ನ ಹೃದಯ ತುಂಬಿದ ಕೃತಜ್ಞತೆಗಳನ್ನು ಅವರಿಗೆ ಸಲ್ಲಿಸುತ್ತೇನೆ.

ತರುವಾಯ ನನ್ನ ಸನ್ಮಿತ್ರರಾದ **ಶ್ರೀ ಎಲ್. ಎಂ. ಗುದ್ದೀನ ಶ್ರೀ ಎಚ್. ಕೆ. ಹನಸಿ** ಹಾಗೂ **ಶ್ರೀ ಶಿದ್ದಯ್ಯ ಬೆಳ್ಳಂಕಿಮಠ** ಇವರು ನನಗೆ ಪುಸ್ತಕವನ್ನು ಅಚ್ಚು ಹಾಕುವ ಸಮಯದಲ್ಲಿ ಬಹಳೇ ನೆರವಾದುದಕ್ಕಾಗಿ ಅವರಿಗೆ ನಾನು ತುಂಬಾ ಉಪಕೃತನಿದ್ದೇನೆ. ಅಲ್ಲದೇ ಸಕಾಲಕ್ಕೆ ಸುಂದರವಾಗಿ ಈ ಪುಸ್ತಕವನ್ನು ಮುದ್ರಿಸಿಕೊಟ್ಟ ಶ್ರೀ ಮಲ್ಲಿಕಾರ್ಜುನ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಾದ ಶ್ರೀ **ಜಿ. ಪಿ. ಮಾಗಡಿ**ಯವರಿಗೂ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಅಪಾರವಾದ ಕನ್ನಡ ಸಾಹಿತ್ಯಕ್ಕೆ ನಾನು ನೀಡುತ್ತಿರುವದು ಇದು ಮೊದಲನೆಯ ಕಿರಿಯ ಕಾಣಿಕೆಯಾಗಿದೆ. ಆದ್ದರಿಂದ ಕಾವ್ಯಕಲಾಪಿಯ ರಸಿಕರು ಸೂಕ್ತ ಸಲಹೆಗಳನ್ನು ಇತ್ತರೆ ಸಾದರದಿಂದ ಸ್ವಾಗತಿಸುತ್ತೇನೆ.

ಜನ್ಮ ದಿನಾಚರಣೆಯ ದಿನ:— **ಗು. ಹು. ಹನ್ನೆರಡಮಠ**
೧೨—೩—೧೯೫೮.

ಪ್ರಿ-ಯುನಿವ್ಹರ್ಸಿಟಿ ಕೋರ್ಸ,
ಶ್ರೀ ಕಾಡಸಿದ್ಧೇಶ್ವರ ಕಾಲೇಜ, ಹುಬ್ಬಳ್ಳಿ.

# ಅರ್ಪಣೆ

## ಶ್ರೀ ರೇವಣಸಿದ್ಧೇಶ್ವರ ದೇವರಿಗೆ

ಹೃದಯ ಕಾವ್ಯ ಕಲ್ಪಲತೆ ಕೊನರಿ ನಿಂದಿರಲು
ದಿವ್ಯ ಅಮೃತ ಸಲಿಲವನೆ ಹನಿಸಿ ಬೆಳೆಸಿಹ ಜ್ಯೋತಿಗಳೆ
ಹಕ್ಕಿಗಳೆ ಚುಕ್ಕಿಗಳೆ ಅಕ್ಕರೆಯು ಉಕ್ಕಲು—
ಸಖ್ಯರಾಗವ ಮಾಡಿ; ಕಾವ್ಯ ನುಡಿಗಳಾದವು ಜಡಿಮಳೆ !

ಸತ್ಯ ನಿತ್ಯವ ಶಾಂತಿ; ಮಿಥ್ಯಮರ್ತ್ಯದ ಭ್ರಾಂತಿ
ಸೌಂದರ್ಯ ಸೊಬಗಿನಿಂ ಬೆರೆದ ಭುವಿಯ ಭಾಗ್ಯ ಸಂಪತ್ತು
ಜೀಕಿ ಉಯ್ಯಾಲೆಯಾಡಿ ಮಾಡಿದವು ಕ್ರಾಂತಿ
ವಿಶ್ವ ಸರ್ವಸ್ವ ಶಕ್ತ ಮಹ ಶಕ್ತಿ ಲಿಂಗದೇವಗಿವು ಮುತ್ತು

ನಿರ್ಮಾಣ–ನಾಶವು, ಆದಿ–ಅಂತ್ಯದ ತುದಿಯು,
ಲೀಲಾಸಾಗರ ಬ್ರಹ್ಮಾಂಡ ಮೀರಿ ನಿಂದಿಹುದೊಂದು ವ್ಯಕ್ತಿಯು
ಓ ಎನ್ನ **ಶ್ರೀ ರೇವಣ ಸಿದ್ಧೇಶ್ವರ** ಶಕ್ತಿಯು !
ಅರ್ಪಿಸುವೆ **ಕಾವ್ಯಕಲಾಪಿ**ಯನು, ಇದುವೆ ನನ್ನಯ ಭಕ್ತಿಯು

# ಕ ಲಾ ಪ ಮಾ ಲೆ


| ಅ. ನಂ. | | ಪೇಜ ನಂ. |
|---|---|---|
| ೧ | ಕಾವ್ಯಕಲಾಪಿ | ೧ |
| ೨ | ಆಚೆಗಿನ ಕೂಗು ! | ೨ |
| ೩ | ಸೃಷ್ಟಿ ಚಿಮ್ಮಿದೆ ! | ೩ |
| ೪ | ಬಂಧನ-ಬಿಡುವು | ೫ |
| ೫ | ಶ್ರೀ ಕಾಡಸಿದ್ಧೇಶ್ವರಾ ! | ೫ |
| ೬ | ಸೋಲು-ಗೆಲವು | ೬ |
| ೭ | ಕವಿ | ೭ |
| ೮ | ಅರಿವ ಮರತೆ | ೮ |
| ೯ | ಧೂಳಿಯು ಕಣ | ೯ |
| ೧೦ | ದುರ್ಗಾಮಾತೆಗೆ | ೧೦ |
| ೧೧ | ಬಡವನ ಹೊಟ್ಟೆ ! | ೧೦ |
| ೧೨ | ಮಿಣುಕು ದೀವಿಗೆ- ಯಾವರೇನು ? | ೧೧ |
| ೧೩ | ಕನ್ನಡಾಂಬೆಯ ಹಂಬಲ | ೧೨ |
| ೧೪ | ಬಂಧನ | ೧೩ |
| ೧೫ | ಕೆಂಡದ ಚಂಡು ! | ೧೪ |
| ೧೬ | ಕಂಡೆನಿನ್ನ | ೧೫ |
| ೧೭ | ಕಾಣಲಿ ಜೀವನ | ೧೬ |
| ೧೮ | ಗುಬ್ಬಿ | ೧೬ |
| ೧೯ | ಹಿತೋಕ್ತಿಗಳು | ೧೮ |
| ೨೦ | ಕವಿ | ೧೯ |
| ೨೧ | ಜೀವನಗಾಡಿ | ೨೦ |
| ೨೨ | ಅಡುಗೆಯ ಮನೆಯ ನಾಟ್ಯ ! | ೨೧ |
| ೨೩ | ಶರಣ ಪಥ | ೨೨ |
| ೨೪ | ಶಿವೆ | ೨೩ |
| ೨೫ | ಚಲುವ ಬುಗ್ಗೆ ! | ೨೪ |
| ೨೬ | ಗರ್ಭ ವೈಚಿತ್ರ್ಯ ? | ೨೫ |
| ೨೭ | ದೇಹತುಂಡಾಯ್ತು! | ೨೬ |
| ೨೮ | ಪಾರಿಜಾತ | ೨೭ |
| ೨೯ | ದ್ವಂದ್ವದಾಟ | ೨೯ |
| ೩೦ | ಬಡಗಣಗಾಳಿ | ೩೦ |
| ೩೧ | ಸ್ಮಶಾನದಲ್ಲಿ ! | ೩೨ |
| ೩೨ | ವೃಷ್ಟಿಕಾಲ | ೩೩ |
| ೩೩ | ಹಾರಲಿ ಹೃದಯ! | ೩೬ |
| ೩೪ | ಗುರುಸಿದ್ಧ ರಾಜ- ಯೋಗೀಂದ್ರರ ಲಿಂಗೈಕ್ಯ | ೩೫ |
| ೩೫ | ಮಳೆ | ೩೬ |
| ೩೬ | ಸದ್ಗುರುವಿಗೆ | ೩೭ |
| ೩೭ | ತಗಣಿಗಳೊಡನೆ ಮಹಾ ಯುದ್ಧ | ೩೮ |
| ೩೮ | ಅರಿದೆನು ನಿನ್ನ | ೩೯ |
| ೩೯ | ಬಸವಣ್ಣ | ೪೧ |
| ೪೦ | ಮಲ್ಲಾಡಪೈಸಿರಿ | ೪೩ |
| ೪೧ | ಓ ಮಾಯಾ ಬಿನ್ನಾಣ ! | ೪೪ |
| ೪೨ | ಬೇಸಿಗೆ | ೫೪ |
| ೪೩ | ಎಲ್ಲಿಹನು? | ೪೬ |
| ೪೪ | ಓ ಎನ್ನ ಸೋದರಿ ! | ೪೭ |
| ೪೫ | ನ್ಯಾಯ ಸೋಂಪಿ | ೪೮ |
| ೪೬ | ಮೇಲು— ಕೀಳು | ೪೯ |
| ೪೭ | "ಸೌಂದರ್ಯ ಸ್ವರ್ಗ!" | ೫೦ |

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೫ | ೪ | ಯಂಜಲಾಗಿಹುದು | ಎಂಜಲಾಗಿಹುದು |
| ೫ | ೧೭ | ಫಲ್ | ಪುಲ್ |
| ೫ | ೨೦ | ಸೌಂಧರ್ಯ | ಸೌಂದರ್ಯ |
| ೧೧ | ೫ | ದೀವಿಗೆ ಯಾದರೇನು? | ದೀವಿಗೆಯಾದರೇನು? |
| ೧೧ | ೧೫ | ದೃದಯ | ಹೃದಯ |
| ೧೮ | ೬ | ನುಗು | ನುಗ್ಗು |
| ೧೯ | ೧೧ | ಅಂಮೃತದಾ | ಅಮೃತದಾ |
| ೧೯ | ೧೬ | ಹೊದಿಸುವದು | ಹೊದಿಸುವ |
| ೨೩ | ೧೨ | ಹರಲಿ ನ್ನು | ಹರಿಸಲಿನ್ನು |
| ೨೬ | ೧೪ | ಶೀಳಿ | ಸೀಳಿ |
| ೨೯ | ೧೩ | ಬ್ರಮ್ಹಚರ್ಯ | ಬ್ರಹ್ಮಚರ್ಯ |
| ೩೩ | ೧೩ | ಅಡಗಿತ | ಆಡಗಿತು |
| ೩೪ | ೬ | ಗಗನವೆನೇ | ಗಗನವನೇ |
| ೩೪ | ೬ | ಇಣಕೆ | ಇಣಕಿ |
| ೩೪ | ೧೩ | ಗಿರಿಸೃಂಗಗಳ | ಗಿರಿಶೃಂಗಗಳ |
| ೩೪ | ೨೦ | ಚಿತ್ರಿಸ್ಯಕ್ತಿ | ಚಿತ್ರಸ್ಯಕ್ತಿ |
| ೩೭ | ೭ | ಆವದನ್ನರೆಯುದವ | ಆವದನ್ನರಿಯುದವ |
| ೩೯ | ೧೬ | ನಿನ್ನ | ನನ್ನ |
| ೪೦ | ೩ | ಶಿಲುಕಿದುದು | ಸಿಲುಕಿದುದು |
| ೪೮ | ೭ | ನೊಂಪು | ನೋಂಪಿ |

# ಕಾವ್ಯಕಲಾಪಿ

ಹೃದಯ ತುಂಬಿ; ದುಂಬಿಯಾಗಿ
ರಸಿಕವರ್ಣ ಮೂಡಲಿ; ಒನಪುಗರಿಯು ಚಿಗುರಲಿ
ಅಂತರಂಗ ಹರ್ಷ ಕೂಗಿ
ಸೃಷ್ಟಿಸ್ಫುರಿಸಿ ರಾಗ ಮಾಡಲಿ; ಹೃದಯ ತಾಳ ಹಾಕಲಿ

ಪಕ್ಕ ಬೀಸಿ, ಮುಂದೆ ಈಸಿ
ಚುಕ್ಕೆಯೆಡೆಗೆ ಓಡಲಿ, ರವಿಯ ಒಡನೆ ಆಡಲಿ
ಮೇಲೆ ಏರಿ, ಹೃದಯ ಸೋಸಿ
ಸತ್ಯ ಶಿವನ ಕಾಣಲಿ; ನಿತ್ಯ ಸೊಗಸು ಸವಿಯಲಿ

ರಸಿಕ ಹಕ್ಕಿ ಹೃದಯ ಕುಕ್ಕಿ
ಚಲ್ವ ಚಣಿಲವೊಲ್ ಜಿಗಿದು ಪುಟಿದು ಆಡಲಿ
ಸ್ವೈರವೆಳಸಿ ಸೊಗಸು ಸೊಕ್ಕಿ
ಸಲಿಲ ಸುಧೆಗೆ ಹಾರಲಿ; ಮಿನುಗು ಮೀನವಾಗಿ ಈಸಲಿ

ಪಿಕರುತಿಯ ಕಂಠ ಕರೆದು
ಕಾಡನೆಲ್ಲ ನಗಿಸಲಿ; ಕಾವ್ಯಕಿನ್ನರಿಯ ನುಡಿಸಲಿ
ತಂತಿ ಮಿಡಿದು; ಕಾವ್ಯ ಕುಣಿದು
ಹೃದಯ ತಣಿದು ಹಾಡಲಿ; ಬಾಳ ಬನವ ಮಾಡಲಿ

ಹೂವ ಹರಿದು, ಹಣ್ಣ ಕಡಿದು
ಸವಿಯ ರಸವ ಕುಡಿಯಲಿ; ನವಿರು ನಾಡಿ ನುಡಿಯಲಿ
ನೆಲ್ಲಿ ಕವಳಿ ಎಲ್ಲ ಜಗಿದು
ಕಬ್ಬು ಮುರಿದು ಮೆಲ್ಲಲಿ; ಸೃಷ್ಟಿ ಸೊಬಗು ಸವಿಯಲಿ

ಚಲುವು ಚಿಮ್ಮಿ; ಹರ್ಷ ಹೊಮ್ಮಲಿ
ಕಾವ್ಯಲತೆಯು ಕುಡಿಯನೊಡೆದು ನವ್ಯವಾಗಿ ನಿಲ್ಲಲಿ
ಸರ್ಗಗಂಗೆ ವರ್ಷ ಕರೆಯಲಿ
ಗರಿಯನುಚ್ಚಿ ಮುದದಿ ಕುಣಿವ ಕಾವ್ಯಕಲಾಪಿಯಾಗಲಿ

•

## ಆಚೆಗಿನ ಕೂಗು !

ಸಾಗರದ ಆಚೆಗಿನ ಕೂಗೊಂದು ಕೇಳುತಿದೆ
ಆರದೋ ಏನೊ? ಯಾರಕರೆಯುತಿಹುದೇನೊ ?
ತೆರೆಯ ಮೇಲೇರಿ ಬೀಸುಗಾಳಿಯಲಿ ಈಸುತಿದೆ
ಬರುತಿದೆ; ಬಿಡದೆ ಬರುತಿದೆ; ಮುಗಿಯಲಿಲ್ಲವೇನೊ ?

ಆರಕೂಗಾರ ಕರೆಗಾಗಿರಬಹುದೀ ಕಾರಿರುಳಿನಲಿ ?
ಮುಗಿಲ ಮಾಳಿಗೆಯಲಿ ಮಿನುಗು ಚುಕ್ಕೆಗಳೂ ಇಲ್ಲ !
ನನಗಾಗಿಯೊ ಇನ್ನಾರಿಗೊ ಯಾರ ಇಚ್ಛೆಯಲಿ ?
ಈಗೇಕೆ ಈ ಮಧ್ಯ; ಮೌನವಾವರಿಸಿಹುದಲ್ಲ !

ಹಕ್ಕಿ ಹೊರಗಿಲ್ಲ; ನಿಶೆಯು ಹೆದರಿಲ್ಲ; ನಿಶ್ಶಬ್ದ !
ನೆಲದ ಮೇಲಲ್ಲಿ; ಬಾನಬಯಲಲ್ಲಿ; ಸಾಗರದ ಜಲದಲ್ಲಿ
ಮಸಣ ಶಾಂತಿಯ ಕುರುಡು ಕುರುಹಾದ ನಿಶ್ಶಬ್ದ !
ಧರೆ ಹಿರಿದು ಇರುವಾಗ ಕುರುಡಿನಲಿ ಕಿರಿದಾಗಿಹುದಿಲ್ಲಿ

ನನ್ನ ಕಂಡಿತೊ ಏನೊ ಕಾರಿರುಳ ಕತ್ತಲೆಯ ಕಣ್ಣು
ಅಲ್ಲ ನಿಜವಲ್ಲ; ಇರಬಹುದು ಅಂತರ್ಯ ಅವ್ಯಕ್ತ ಜ್ಯೋತಿ
ಸನಿಯದಲ್ಲಿಲ್ಲ; ಬಹುದೂರ. ಕಾಣದಾಗಿವೆ ಕಣ್ಣು
ಕರುಣೆ ಕರೆಯುವ ಅಕ್ಕರೆಯ ತಾಯಕರುಳ ಆತುರ ದ್ಯೋತಿ

ಎಲ್ಲಿಗೋ ಮುಳುಗಿಹೆನು; ಇರುವ ಅರುವಿಲ್ಲ
ಮೌನ ವಿಶ್ವದಲಿ ಕಾರಿರುಳ ಸಾಗರದ ಆಳದಲಿ ಮುಳುಗಿಹೆನು
ಆ ಕೂಗು ಕೂಗಲ್ಲ; ಭಾಗ್ಯಕರೆ ಇರಬಹುದಲ್ಲ?
ದಾರಿ ತೋರುವ ಕೂಗು; ನನ್ನಿರವಿನ ಸತ್ಯಕೂಗು! ಓಗೊಡಲೇನು?

ನಂಬುವೆನು ನನಗಿರುವ ನನ್ನ ತಾಯ ಕರುಳು
ಅಜ್ಞಾತ; ಅರಿವಿಲ್ಲ! ಧ್ವನಿಯೆತ್ತ ನಡೆದು ಕೂಡುವೆ ಮೊದಲು
ಹಸಿದೊಡಲಿಗದೋ ಮೃಷ್ಟಾನ್ನ! ಮರೆದರೆ ಮರುಳು
ನಿಜಕು ಆ ಮಾತೆ ಜಗನ್ಮಾತೆ ದಿವ್ಯಮಾತೆ; ನಡೆ ಮೊದಲು

## ಸೃಷ್ಟಿ ಚಿಮ್ಮಿದೆ !

ಸೃಷ್ಟಿ ಚಿಮ್ಮಿದೇ; ಪಕ್ಕ ಬಡೆದು ಹಾರಿದೆ
ಅತ್ತಲಿತ್ತ ಸುತ್ತು ಓಡಿ ಉಕ್ಕಿ ಹರಿದಿದೆ
ಮೊಗ್ಗೆಯಲ್ಲಿ ನೆಗೆದು ಪಕಳೆರೂಪ ತಾಳಿದೆ
ಅಗ್ಗ ಹುಲ್ಲಿನಲ್ಲಿ ಸಗ್ಗ ಸೊಗವ ತುಂಬಿದೆ
ಭ್ರಮರವಾಗಿ ಬಂದಿದೆ, ಹೂವಾಗಿ ಕರೆದಿದೆ
ಭ್ರಮೆಗೆಟ್ಟು ಭ್ರಮಿಸುವಾ ಕಬ್ಬಿಗನಾಗಿದೆ
ದಿಬ್ಬದಾ ಹುಲ್ಲಲ್ಲಿ ಕಾಲುದಾರಿ ಕೊರೆದಿದೆ
ಅಬ್ಬಾ ! ಅದರ ನೋಟ ಹರುಷ ತರಿಸಿದೆ

ಕೊಳದಲ್ಲಿ ತೆರೆಯಾಗಿ ಮುಂದೆ ನುಗ್ಗಿದೆ
ಹರುಷದಾ ಹೊಳಿಯಾಗಿ ಅಕೋ! ಹಿಗ್ಗಿದೆ
ಸರರಾಣಿ ತಿಲಕವ್ರೊಲ್ ಕಮಲಾಗಿ ಎದ್ದಿದೆ
ಕೋಗಿಲೆಯ ಗಾನದಲಿ ಬಲೆಯು ಬೀಸಿದೆ
ಗದ್ದೆಯಾ ಬದುವಿನಲಿ ಹಾವಾಗಿ ಸರಿದಿದೆ
ಗುಡ್ಡದಾ ಎದುರಿನಲಿ ತಗ್ಗಾಗಿ ಉಳಿದಿದೆ
ಟೆಂಗಿನಾ ಗರಿಯೊಳು ಗಾಳ್ಯಾಗಿ ಸುಳಿದಿದೆ
ಮುಳ್ಳಿನಾ ಬೇಲಿಯಲಿ ಬಳ್ಳ್ಯಾಗಿ ಬೆಳೆದಿದೆ
ಮೋಡ ತೂರಿ ತಂಪು ಮಾಡಿ ಹರುಷ ಗೈದಿದೆ
ಗುಡುಗು ಮಿಂಚು ತಾಳಿ ಚಪ್ಪಾಳೆ ಹೊಯ್ದಿದೆ
ರಫಾ ಧಫಾ ನೀರತರೆಸಿ ಅರಬು ಜೈಸಿದೆ
ಅಪ್ಪಾ! ಅಬ್ಬಾ!! ಸೃಷ್ಟಿಸೊಬಗು ಸಗ್ಗವನೆ ಕೊಯ್ಸಿದೆ
ಕವಿಯ ಕಟ್ಟಿತಂದು ಕಪಿಯಾಗಿ ಮಾಡಿದೆ
ನಿನ್ನ ಬಲೆ! ಈ ಕಲೆ!! ಎಲೆಲೊ ಬಲೇ ಭಲೆ
ಅಹುದೆಲೊ ನಿನ್ನ ಮಂತ್ರ ಎನ್ನ ಮನ ಕದ್ದಿದೆ
ಎಂಥ ಮಾಟವೆನುತ ನಗಲೊ ಅಳಲೊ ಹೇಳಲೆ

# ಬಂಧನ-ಬಿಡುವು

ನೀರುಣಿಸಿ ಸಲುಹಿದರು ಹುಳುಹತ್ತಿ ಬೆಳೆಯಲಿಲ್ಲಾ !
ತಿಳಿಯಲಿಲ್ಲಿನಗೆ ಮಣ್ಣಲ್ಲಾ ಉಸುಕೆಂದು ಈ ನೆಲಾ!
ಹೃದಯ ಬಟ್ಟಲೊಳು ಭಕ್ತಿಹಾಲು; ದೇವನೊಲಿಯಲಿಲ್ಲಾ!
ಬಟ್ಟಲೇ ಯಂಜಲಾಗಿಹುದು; ಮಾಯೆ ಈ ಹೃದಯವಲಾ!

ಚಲುವಾದ ಕಾಯಾಯ್ತು; ತಿನ್ನಲಾಸೆ ಮನಕಾಯ್ತು
ಮರವೇರಿ ಹರಿದು; ಕೆಳಗಿಳಿದು ಒಡೆದೆ; ಹುಳುಕಾಯ್ತು!
ಹೊನ್ನಿನರಮನೆ ಇತ್ತು; ಎದೆಯುಬ್ಬಿ ಮನ ಹೋಯ್ತು
ಓಡಿ ಹಿಡಿಯುತ ನೋಡಿದೆ; ಸ್ವಪ್ನವೆಂದಾಯ್ತು !

ಹಳ್ಳದಲಿ ಈಸಾಡಿ ಸಾಕೆಂದು ಬರುವಾಗ; ಕೇದಗೆವನ !
ತಡೆಯದಾ ಮೂಗು ಕೈಗೆ ದುಡುಕೆಂದಾಗ; ಹಾ! ಹೆಡೆ ಹಾವಿನ
ಜೀವನದಿ ಏಕಾಗಿ ಜೋಕೆಯಿಂದಿರುವಾಗ; ಆಶೆ ಬಂಧನ!
ನೆಚ್ಚಿ ಗುರುವರನ ಬೇಡುವದೇ ಮುಕುತಿ ಮಾನವನ!

# ಶ್ರೀ ಕಾಡಸಿದ್ಧೇಶ್ವರಾ !

ಯತಿವರನೆ ನಿನ್ನ ಹೆಸರಿಂದು ಉಸಿರಾಗಿಹುದು
ನಿನ್ನ ತಪೋಬಲದಿ ಬೆಳಗಿರುವೆ ನಾಡನೆಲ್ಲವನು
ಸುಖ—ದುಃಖ ಸಮನಾಗಿಸಿದ ಸ್ಥಿತಪ್ರಜ್ಞ ನೀನು!
ಕಡುವೀರ ಸಿದ್ಧಯೋಗಿ ಶ್ರೀ ಕಾಡಸಿದ್ಧೇಶ್ವರಾ!!

ಈ ಪುಣ್ಯ ಭೂಮಿಯಲಿ ಫಲ್‌ಪೊದರು ಬೆಳೆದು
ಹಿಂದೊಮ್ಮೆ ಪ್ರಕೃತಿ ರೌದ್ರರಮಣೀಯತೆ ತಾಳಿತ್ತು,
ನಿನ್ನ ಅಧ್ಯಕ್ಷತೆಯಲಿ ಸರ್ವವೂ ನಿಯತ ಸ್ವಚ್ಛಂಧವಿತ್ತು,
ಇಂದೋ ಸೌಂಧರ್ಯ ಸುಕುಮಾರತೆ ಮೆರೆಯುತಿವೆ!

ಕಾಡೆಲ್ಲಾ ನಾಡಿನಾ ಬಯಲಾಯ್ತು; ಮೋಡ ಮಿಂಚಾಯ್ತು
ಕಾಡು ನಗುವ ನಂದನವಾಯ್ತು; ಮಿಂಚು ಬೆಳಕಾಯ್ತು.
ಕಡು ಕಾಡೇ ನಾಡಿಗೆ ಪ್ರಥಮ ನಾಂದಿಯಾಯ್ತು
ನೋಡು **ವಿದ್ಯಾನಗರವೇ** ಮೈದಾಳಿತು; **ಶ್ರೀ ಕಾಡಸಿದ್ಧೇಶ್ವರಾ !**

ಕಾಡಿನಲಿ ತಪಸ್ಗೈಯ್ಯೆ ವಾಸಿಸಲು ಶ್ರೀ ಕಾಡಸಿದ್ಧೇಶ್ವರನಾದೆ,
ಸೌಂದರ್ಯ ಪೋಷಕನಾಗಿ ನಾಡ ಶ್ರೀ ಸಿದ್ಧೇಶ್ವರನಾದೆ.
ಕಾಡನ್ನು ಸತ್ಯ-ಸತ್ವಗಳಲಿ ಮೆರೆವ ನಂದನವಾಗಿಸಿದೆ !
ನಿನ್ನ ತಪೋವನವನೇ ಸಂಸ್ಕೃತಿಯ ಬೀಡಾಗಿಸಿದೆ ! !

## ಸೋಲು—ಗೆಲವು

ಗೆಲವಿರಲಿ, ಬರದಿರಲಿ ಎದುರು ಸೋಲು
ಎಲ್ಲೆಡೆಗು ನಡೆದಾಗ ಗೆಲುವೆ ಮುಂಬರಲಿ
ಗೆಲುವಿನಾಶಯು ಜೀವ ಜಗದಿ ಮೇಲು
ಸೋಲಿನಲ್ಲೇನಿಹುದು; ಗೆಲುವೆಮಗೆ ಕಾದಿರಲಿ

ಒಲವು ಗೆಲವಿನೆಡೆಗೆ ಒಯ್ಯುತಲಿರಲಿ
ತಿಳಿದಿರಲಿ; ಬರುವವೇನೋ ನೂರಾರು ಸೋಲುಗಳು
ಕಲ್ಲು-ಮುಳ್ಳಿಲ್ಲದ ದಾರಿ ಆವುದಿಹದಲಿ?
ಹಳ್ಳ-ಕೊಳ್ಳಗಳಿಲ್ಲದೆ ಓಡಿಹುದಾವದಾರಿ ಜಗದೊಳು

ಹಳ್ಳ ಹಾಯಿತೆಂದು ಹಿಮ್ಮೆಟ್ಟಿ ಹೊರಡದಿರು
ಹಿರಿಯಗಿರಿಯೊಂದು ಬಂತೆಂದು ಕುಂದದಿರು ಎದೆಯ
ಬಿಸಿಲು ಉರಿಯಾದೊಡೆ ಬಿಸಿಯುಸಿಯದಿರು
ಬಿದ್ದರೊಮ್ಮೇನಾಯಿತು, ಏಳದಲೆ ಬೀಳಬೇಕೆ ಇಲ್ಲಿ

ಬಂವ ಸೋಲನು ಜೈಸದೆ ಮಾಣದಿರು
ಸೋಲನೂಕಿ ಗೆಲುವಾದೊಡೆ; ನಗದಿರು ಸೋತವರಿಗಾಗಿ
ಗೆಲುವಿನೊಡೆ ಕೈಮಾಡಿ ಕರೆಯಲು ಮರೆಯದಿರು
ವಿಜಯದೊಡೆ ಮುನ್ನಡೆ ಗೆಲವಿನಹಂಕಾರವನು ನೀಗಿ

## ಕವಿ

ಮುಚ್ಚು—ಮರೆ ಇಲ್ಲದ ಚೊಕ್ಕ ಸ್ಫಟಿಕದ ಹೃದಯ
ಕಾವ್ಯವಾಹಿನಿಯ ಉದಯ ಬಿಂದು
ಕವಿಯ ಹೃದಯ; ಕಾವ್ಯ ಜ್ಯೋತಿಯ ಕಾಡು
ಮಿಂಚಿಹುದು; ಓ ಚಿಮ್ಮಿ ಬಂದಿಹುದು

ಸರ್ಗಗಂಗೆಯ ಕರೆದು ನಲಿದಾಡಬಲ್ಲ
ಸೂರ್ಯ ಚಂದಿರರೊಡನೆ ಆಡಬಲ್ಲ
ಶಾಂತಿ ರೌದ್ರವ ಕಂಠ ಒಂದು ಮಾಡಲುಬಲ್ಲ
ವಿಶ್ವ ಶಕ್ತಿಯ ಬಿಂಬ ಕವಿಯೆ ಎಲ್ಲ

ಪಾತಾಳ ಮೇಲೆತ್ತಿ, ಸ್ವರ್ಗ ಆಳಕೆ ಒತ್ತಿ
ಕುಣಿದು ನಲಿಯಲು ಬಲ್ಲ ಕವಿಯು
ಲೋಕಗಳನು ಕಾಣುವನು ತನ್ನೊಳಗೆ ಕೆತ್ತಿ
ಚಿತ್ರಿಸುವನು ವಿಶ್ವವನೆ ಕವಿಯು

ಸೃಷ್ಟಿ ಮಾಡುವ ಶಿಲ್ಪಿ, ಪ್ರಳಯದದ್ಭುತ ಶಕ್ತಿ
ಬಾಳ ಬೆಳಗಿನ ಜ್ಯೋತಿ ಇವನು
ಸತ್ಯ ಸೌಂದರ್ಯದೊಳು ಸತ್ಯಶಿವನ ನುಡಿವ ವಿರಕ್ತಿ
ಸರ್ವಸ್ವ ಭಾಗ್ಯ ವೀರನೇ ಇವನು

# ಅರಿವ ಮರತೆ

ಯಾರಿಹರು ಬನ್ನಿರೊ; ದೀಪವೊಂದನು ತನ್ನಿರೋ
ಕಡಿಯಿತೊಂದೇನೋ ಈ ಕತ್ತಲಲ್ಲಿ
ತಾಳಲಾರೆನು; ಎಲ್ಲಿ ಹೋಗಿರುವಿರೋ?
ನಾ ಮಾಡಬಲ್ಲೆನೇನು ಕಾವಳಲ್ಲಿ !

ಅಪ್ಪ ಬರಲಿಲ್ಲ, ಅಕ್ಕ ಇಲ್ಲಿಲ್ಲ, ಮತ್ತಾರ ಸುಳಿವಿಲ್ಲ
ನಮ್ಮಮ್ಮ ಹೋದವಳು ಬರಲೇ ಇಲ್ಲ
ಯಾರು ಕಾಣುವವಿಲ್ಲ; ನೋವು ಕೇಳದಲ್ಲ !
ನಾನೇ ಒಬ್ಬವನು; ಕತ್ತಲು ಜಗವೆಲ್ಲ !

ನೋವು ಏರುತ್ತಿದೆ, ಅರಿವು ಹಾರುತ್ತಿದೆ; ಮಾಡಲೇನು?
ಬಾಯತುಂಬೇನು? ಬುರುಗು; ಉಗುಳಲ್ಲ!
ಹಾವೇನು? ಆಯ್ಯೋ ತಿಳಿಯಲಿಲ್ಲೆನಗೆ ಹಾವಿನೀವಾಸ!
ಹಾ! ಉಸಿರಿದ್ದ ಅಜ್ಜ; ಮರೆತೆನಲ್ಲ !

ಸರಿಯುತಿದೆ, ಆ ಶಬ್ದ ಸರಸರನೆ ಓಡುತ್ತಿದೆ ಆಚೆಗೆ
ಅಕೋ ! ಕತ್ತಲೆಯೊಳು ಕರಿಯ ಹಾವು !!
ಕಡಿದಾಗ ಅರಿದೆ, ಮೊದಲೇ ಹೊಳೆಯಲಿಲ್ಲವೆನಗೆ
ಅರಿವ ನಾ ಮರೆತು ಬಂದಿತೀ ನೋವು

# ಧೂಳಿಯ ಕಣ

ಗಚ್ಚು ಮಾಳಿಗೆ ಮೇಲೆ, ಕಲ್ಲು ಹಾಸಿಗೆ ಕೆಳಗೆಲ್ಲ
ಎಡಬಲಕು ಇಹುವು ರಂಜಿಸುವ ರಂಗು ಮಿರುಗುವ ಗೋಡೆ
ಸದ್ದಿಲ್ಲ ! ಕಂಡು ಕಂಡಿಲ್ಲ !! ಬಂದು ಬಂದಿಲ್ಲ !!!
ಯಾವೆಡೆಯಿಂದಿಳಿಯುವಿರಿ ನೀವು? ನಿಮ್ಮ ನಾ ನೋಡೆ

ಮಿಣಿಕೊಮ್ಮೆ, ಇಣಿಕೊಮ್ಮೆ ಮಿಂಚುವಿರಿ
ಕಣವೇನು! ಕ್ಷಣದೊಳ್ ಕಾಣವೀ ಮುಂದಣ ಕಣ್ಣು
ಅಡಗುವಿರಿ, ಓಡುವಿರಿ, ನೀವೇನೋ ಆಡುವಿರಿ?
ಮನೆಯೆಲ್ಲಿ? ಇರವೆಲ್ಲಿ ನಿಮಗೆ? ಇಲ್ಲವೇ ಹಸಿವೆಗಣ್ಣು?

ಹಿರಿದೊಂದು, ಕಿರಿದೊಂದು ಹಾರುತಿರುವಿರೆನಿತೊ
ಬರಿಗಣ್ಣು ಅರಿಯದಿಹ ಮರಿಮಕ್ಕಳೆನಿತಿಹರೊ!
ನಿಲ್ಲುವಿರಿ, ನಡೆಯುವಿರಿ, ಓಡುವಿರೆನಿತೊ!
ಬಂದಿರೆಲ್ಲಿಂದ ? ಹೋಗುವರಿನ್ನೆಲ್ಲಿಗೆ ? ನೀವೂ ಅರಿಯದವರೊ

ಗಾಳಿಯಲಿ ಹಾರುವಿರಿ; ಗೋಡೆಯ ಹಾಯುವಿರಿ
ನೋವಾಗದೆ ನಿಮಗೆ, ತಪ್ಪೀತು ದಾರಿ ನಿಮಗೆ
ಈ ಕೋಣೆ; ಆ ಕೋಣೆ! ಹೇಗೆ ಹೊರಳುವಿರಿ?
ಬಲ್ಲವರು ನೀವಿರಲು ಕೇಳುವುದೇನು ನಾ ತಮಗೆ !

## ದುರ್ಗಾಮಾತೆಗೆ

ನಾಡನಾಳುತೆ, ಜಗವ ಕಾಯುತೆ; ಅದೋ ದೇವಿ !
ನಿಂದಿಹಳು ಭುವನ ಭಾಗ್ಯೇಶ್ವರಿ, ಇದೋ ಕಾಣ ಬನ್ನಿ!!
ದುಷ್ಟರನು ದಂಡಿಸುವ, ಭಕ್ತರನು ರಕ್ಷಿಸುವ ಶಾಂಭವಿ
ವಿಜಯಿ ಮಹಾ ತಾಯಿ ಚಂಡಿಯಾ ಭಜನೆಗೈತನ್ನಿ

ಗಗನದಲಿ ಗುಡುಗುವಾ ಗುಡುಗಿವಳು
ಕಾರ್ಮೋಡಗಳೇ ತಾರಕಾಸುರನ ತಂಡದವರು
ಸಿಡಿವ ಮಿಂಚು ಸಿಡಿಲುಗಳೇ ಇವಳಾಯುಧಗಳು
ಈ ಸುರಿವ ಮಳೆಯೋ ರಿಪುಗಳ ಕಾಳಗವ ಬೆವರು

ಧರೆಯಾಕಾಶಕೂ ತಾಳ್ದ ವಿರಾಟರೂಪದವಳು
ಇಂದೋ ಮಹಾನವಮಿ; ತೋರುವಳು ಜಗನ್ಮಹಿಷಿ
ನಡಗುವ ಎಡವುವ ತನ್ನಯ ಮಕ್ಕಳ ಕಾಯ್ವಳು
ಓ ದುರ್ಗೇ! ನಮಿಸುವೆ ತಾಯೇ!! ಆದಿ ಅವತಾರ ಪುರು.

## ಬಡವನ ಹೊಟ್ಟೆ !

ಓಗೊಡು, ಹಸಿದ ಕೂಗು ಕೇಳುತಿದೆ
ಮನವಬಿಚ್ಚು, ಕಲ್ಲೆದೆಯ ಉಚ್ಚು
ಓಡು, ಹೊಟ್ಟೆಯುರಿಯು ಕರೆಯುತಿದೆ
ಸಾಕು ಸಿರಿಯ ಹುಚ್ಚು, ಬಡ ಬಡಬಾಗ್ನಿ ಕಿಚ್ಚು !

ನಿನ್ನೀ ಹೊಟ್ಟೆ ಸಿರಿತನದ ಮೊಟ್ಟೆ
ಅಂಬುಲಿಯ ಕಾಣದವ ಮಣ್ಣಿನಾ ಮೊಟ್ಟೆಯೆ ?
ರಸಿಕನಾ ವರ್ಣ ಚಿತ್ರವೆ ಓ ಅವನ ಚಿಂದಿ ಬಟ್ಟೆ !
ಹಾ! ಅವನೊಡಲ ಅಳಲನಿಂಗಿಸಲರಿಯಿರೇ ?

ಅರಳಿ ಪುಷ್ಪವಾಗಲಿ ನಿನ್ನ ಹೃದಯ
ತೆರೆದು ಅರಿಯಲಿ ಜೀವನ ಹೃದಯದಾತ್ಮ
ಕರೆದು ಕೈ ನೀಡಲಿ ಬಡವಗಭಯ
ತಾ ಬಡವನೆಂಬುದ ಮರೆಸಲಿದೇ ಪರಮಾತ್ಮ!

## ಮಿಣುಕು ದೀವಿಗೆ ಯಾದರೇನು ?

ದಿಳ್ಳಿಯೊಂದರ ಒಳಗೆ, ದಿಬ್ಬವೊಂದರ ಮೇಲೆ,
ದೊಡ್ಡದೀವಿಗೆಯಡೆಗೆ ನಾ ಕುಳಿತಿದ್ದೆ.
ಯಾವುದೋ ಎಡೆಯಲ್ಲಿ; ಹಣತೆಯೊಂದರ ಮೇಲೆ
ಮಿಣುಗುವಾ ಜಿನುಗುದೀವಿಗೆ ಕಂಡಿದ್ದೆ

ಬೀಸುಗಾಳಿಯು ಮೇಲೆ ಈಸು ಬಾರದೆ ಸಾಗಿತ್ತು
ಇಲ್ಲಿಯೋ ಅಲ್ಲಿಯೋ ಎಂಬಂತೆ
ಮುಳುಗಿ ಮರೆಯಾಗಿ ಮೇಲೆದ್ದು ಕಂಡಿತ್ತು
ಚಿಕ್ಕ ಚುಕ್ಕೆಗೂ ಜೀವ ದಾಹವಂತೆ!

ಕಂಡಾಗ ಕಣ್ಣೊಮ್ಮೆ; ಮೂಗು ಮುನಿಸಿ ಮುರಿದಿತ್ತು!
ಹಿರಿದಕ್ಕೆ ಕಿರಿದರಾ ಮಾತೇಕೆ?
ಜಂಭ ಕೂಗಿತ್ತು, ಹೃದಯ ಕೇಕೆ ಹಾಕಿತ್ತು!
ಕಿರಿದೆಲ್ಲ ಕರಿದೆಂದು ಅನ್ನಬೇಕೆ ?

ದೀವಿಗೆಯು ಬೆಳಗಳಿದು; ಗುಡ್ಡದಿ ಕೆಳಗಿಳಿದು
ಹೃದಯ ಕುಸುಮವರಳಿ ಹೊರಟಿದ್ದೆ
ಹಿರಿದು ಮೆರೆವಾಗ ಕಿರಿದನ್ನು ಕಾಣಲೆಂದು
ಜೀವನವೇ ದ್ವಂದ್ವಮಯದೊಳೊಂದೆನಲು ಅರಿತಿದ್ದೆ

# ಕನ್ನಡಾಂಬೆಯ ಹಂಬಲ

ಏಕೀಕರಣದ ಪೂರ್ವದಲ್ಲಿ ಬರೆದ ಕವನ

೧

ಒಂದಿರುಳ ಕನಸಿನಲಿ
**ಕನ್ನಡಮ್ಮನ** ಕೇಳಿದೆನು
'ಬೇಕು ನಿನಗೇನು ಎಂದೂ'

೨

ಪೌರ್ಣಿಮೆಯ ಚಂದ್ರನಿಗೆ
ಕಲೆಯ ತೆರದೀ ನನಗೆ
ಒಡೆದ ಕರ್ನಾಟಕದ ಕುಂದು ಎಂದೂ

೩

ಕೋಡಿಯೊಡೆದಿಹ ಕಣ್ಣೀರು
ಹೊಳೆಯಾಗಿ ಬಿಡದೆ ಸುರಿಸಿ
ಮನಬಿಚ್ಚಿ ಮೊರೆಬಿದ್ದಳೆನಗೆ

೪

ಹುಲಿಯ ಬಾಯಿಗೆ ಬಿದ್ದು
ಕೊರಗಿ ಕಿರುಚುತಲಿರುವ
ಕರುವಿನಾ ತೆರದಿ ಕೂಗಿದಳೆನಗೆ

೫

'ಸುತ್ತೆಲ್ಲಾ ಸವಿಹಣ್ಣು
ತುಂಬಿ ತುಳುಕಿದರೇನು?
ಹೊನ್ನಿನಾ ಸಂಕಲೆಯು ಸುತ್ತಿಹುದೆಂದೂ

೬

ನನಗೊಂದೇ ವಚನವು ಬೇಕು
ಏಕೀಕರಣವು ಬೇಕು
ನಿಮ್ಮೆಲ್ಲರ ತ್ಯಾಗ ಸಾಹಸ ಬೇಕು

# ಬಂಧನ

ಈಸಲಾರೆ ಇನ್ನು ನಾನು; ಕಾಣಲಾರೆ ಮುನ್ನು
ಕಡಲ ನಡುವೆ ಈಸಿದೆ
ತುದಿಇಲ್ಲ, ಮೊದಲಿಲ್ಲ; ಮಾಡಲೇನು ಇನ್ನು
ದಣಿದು ನಾನು ಬಳಲಿದೆ

ಏಸು ಕಾಲ ಈಸಿದೆ! ಎನಿತು ದಿನ ನೂಕಿದೆ!
ಮುಗಿಯ ಬಹುದೆ ಕಡಲು?
ಮುಗಿಯಲಿಲ್ಲ ತಿಳಿಯಲಿಲ್ಲ; ಕೈಯಬೀಸಿದೆ
ಇನ್ನು ತಾಳದೆನ್ನ ಒಡಲು

ಹಿರಿಯ ಕಿರಿಯ ತೆರೆಗಳೆಲ್ಲ ಹಿಂದೆ ಹಾಕಿದೆ
ಹೃದಯ ಮುಂದೆ ಚಾಚಿದೆ
ಕಣ್ಣು ಕಂಡ ದೂರವನ್ನು ಎಲ್ಲೋ ದಾಟಿದೆ
ಇನ್ನು ಮುಂದೆ ಹಾರಿದೆ

ಬೀಸುಗಾಳಿ ಬಿರುಗಾಳಿ ಎಲ್ಲ ಸಹಿಸಿದೆ
ತೋಳ ಬೀಸಿ ಮತ್ತೆ ಈಸಿದೆ
ಗಗನ ಮೇಲೆ ನೀರು ಕೆಳಗೆ; ಮುಂದೋಡಿದೆ
ಅರಿಯದ ಗುರಿಯತ್ತ ಸಾಗಿದೆ

ಎನಿತೊ ಏನೋ ಈಸಿ ಬಂದೆ. ಇನ್ನೇನು ಮುಂದೆ?
ಕಿರಿಯ ತೋಳು ಸಹಿಸಬಹುದೆ?
ಎನಿತೊ ತೆರೆಯನೇರಿ ಅಳಲ ತಾಳದಾದೆ
ನನ್ನ ಗುರಿಯ ದಾರಿ ಅರಿಯದೆ ಹೋದೆ

ನಿಂತರೆ ಮರಣ, ನಡೆದರೆ ನರಕ ವೇದನ
ಅಯ್ಯೊ ವಿಧಿಯ ಬಾಧನ !
ಯಾರು ಇಲ್ಲ ಇಲ್ಲಿ ಎನಗೆ ಕೇಳಲೆನ್ನ ಕ್ರಂದನ
ಯಾರೆನಗೆ ಬಿಡಿಸಲೀ ಬಂಧನ ?

## ಕೆಂಡದ ಚಂಡು!

ಚಿಗುರಿದಾ ಹುಲ್ಲಲ್ಲಿ; ಚಲುವಿನಾ ಓಟದಲಿ
ಆಡುತಲಿ ಸುಳಿಸುಳಿವ ಓ ನಿಲ್ಲು ಹಾವೇ !
ನಿನ್ನ ಅಂದವೇನು ಬಣ್ಣ ಮಿಂಚುವ ನಿಲವಿನಲಿ
ವಿಷಹೊತ್ತ ಹೆಡೆಯೇ ನಿನ್ನ ಗೆಲುವಿನ ಠೀವೆ!

ತಡೆ ಇನ್ನೂ ಕ್ಷಣವನ್ನು ಮಿನುಗು ಮಿಂಚಿ
ನಾಕದಿಂ ಭುವಿಗೊಗೆದ ಬೆಳ್ಳಿಯೂ ಛಡಿಯೆ
ನಿನ್ನ ನೋಡಲು ನಿಂತಿಹೆನು ದಿಗಂತದಾಚಿ
ಹಾ! ಬೆಳ್ಳಿರೂಪದ ನೀನೊಂದು ಕಿಡಿಯೆ!!

ಎನಿತು ಅಂದದ ಗೊಂಬೆ, ಬೆಲೆ ಏನೊ!
ಚಂದ ವರ್ಣ ಸುವರ್ಣದಿರಬಹುದೆ ಎಂದೆ
ಎಲ್ಲ ಎಳೆಯರ ಕಣ್ಣು ಎಳೆದಿಹುದೇನೊ!!
ಕರಚಾಚಿ ನಾ ಹಿಡಿದೆ. ಓ ಕಿಟ್ಟದಾ ಗೊಂಬೆ!

ನಿಲ್ಲು ನೋಡುವೆನೆಂದೆ ಮೂಡಣದ ರವಿಗೆ
ಗಿರಿಶೃಂಗವೃಂದದಲಿ ಮೂಡುವೊಡೆ ಅವಗೆ
ಎನಿತು ಚಂದದ ಚಂಡು ಅಂದೆ ಭಾಸ್ಕರಗೆ
ಮೇಲೇರಿ ನಿಂದಾಗ; ಚಂಡಲ್ಲ ಕೆಂಡನೆಂದೆನವಗೆ

# ಕಂಡೆ ನಿನ್ನ

ಓ ದೇವ ! ಓ ನಿನ್ನ ಚರಣಕೆನ್ನ ಶರಣು !
ಈ ದೇಹ! ಈ ಪ್ರಾಣ ನಿನಗೆ ಶರಣು !!
ಅದೋ ! ಅಲ್ಲಿ—ಅಗೋ!! ನಾ ಕಂಡೆ ನಿನ್ನ
ಇಗೋ! ಇಲ್ಲಿ—ಇಗೋ!! ನಾ ಪಡೆದೆ ನಿನ್ನ

ಅಲ್ಲಿ! ಹುಲ್ಲ ಗುಡಿಸಿಲಿನಲಿ ಕಂಡೆ ನಿನ್ನ
ಅಲ್ಲಿ! ಅವರಾಡುವ ಬಡ ಸೊಲ್ಲಿನಲ್ಲಿ!!
ಅಲ್ಲಿ! ಓ ಎಂದು ಕೂಗಿಡುವ ಬಾಯೊಳಲಿ
ಬಸವಳಿಪ ಬಿಸಿಯುಸಿರಿನಲಿ ಕಂಡೆ ನಿನ್ನ

ದಿನದಿನದಿ ದುಡಿ ದುಡಿದು ಬಳಲುತಿಹ
ದೀನರಾ ಹೀನ ಕರುಳಿನಲಿ ಕಂಡೆ ನಿನ್ನ
"ಆ"! ಎಂದು ತಾ ರಾಗವಿಡಿದಾಡುತಿಹ
ಬಡಮನದ ಬಡ ಶಿಶುವಿನಲ್ಲಿ ನಿನ್ನ!

ಅನ್ನವಿಲ್ಲದ ಹೊಟ್ಟೆಯೊಳು ನಾ ನಿನ್ನ
ಚನ್ನವಿಲ್ಲದಿಹ ಬಟ್ಟೆಯೊಳು ನಿನ್ನನ್ನ
ಉನ್ನತವಲ್ಲದ ಮುರುಕು ಗುಡಿಸಿಲಿನೊಳು ನಿನ್ನ
ಮುನ್ನಾಗಿ ಕಂಡೆ ನಾ, ದಲಿತ ರೂಪಿ ನಿನ್ನ

ದೀನರಾ ಸವಿನಾಲಿಗೆಯಲಿ, ದಾನಿಗಳಾ
ದಾನಕರದಲಿ, ಸತ್ಯದಾ ಕರುಳಿನಲಿ
ನಡುಗುತಿಹ ಕಡುಬಡ ದೇಹದಲಿ
ಕರುಣೆಯಾ ಮನದಲಿ ಕಂಡೆ ನಿನ್ನ!

# ಕಾಣಲಿ ಜೀವನ

ಒಸರಿ ಕೊಸರಿ ಕಸುವಿನಿಂದ ಹಾರಲೆನ್ನ ಜೀವನ
ಕಸಕು ಮುಸಕು ದೂರ ಸರಿಸಿ ಅಳಿಯಲೆನ್ನ ಬಂಧನ
ಸತ್ವಸುಧೆಯು ಉಸಿರಿನಿಂದ ಕಾಣಲೆನಗೆ ಮುಂದನ
ಶ್ರೀಯು ಮೋಹ, ಶ್ರೀಯು ದಾಹ ಅಳಿಯಲದೇ ನಂದನ

ರಕ್ತ ಉಕ್ಕಿ, ಶಕ್ತಿ ಮಿಕ್ಕಿ ಕೋಡಿಯೊಡೆದು ಓಡಲಿ
ಕಾಮ ಮೋಹ ಸಿರಿಯು ಸ್ವಾರ್ಥ್ಯವೆಲ್ಲ ಭಸ್ಮಮಾಡಲಿ
ಎನ್ನ ಮನವು ವಿಷಯು ಬಲೆಗೆ ರಾಮಬಾಣವಾಗಲಿ
ನಾವು ನೀವು ಒಂದೇಯುಂಬ ಕ್ರಾಂತಿಕಹಳೆ ಊದಲಿ

# ಗುಬ್ಬಿ

ಪುಟ್ಟ ಹೃದಯವಾದೊಡೆ ಏನು? ಹರುಷ ಹೊನಲು!
ವಿರಸವರಿಯದ ಸರಸ ಸೊಗಸು ಏನು?
ನಿಮ್ಮ ಜೀವನರಾಗ ಎಮಗಿಂತ ಬಲು ಮಿಗಿಲು
ಸುಖಜನ್ಮ ಸಾರ್ಥಕತೆ ನಿಮಗೆ ಏನು?

ಸರ್‍ರೆಂದು ಬುರ್‍ರೆಂದು ಹಾರುವಿರಿ! ಎಲ್ಲಿಗೋ ?
ಆಚೆಯಾ ಗಿಡದ ಪಕ್ಕದಾ ಹೊಲಕೊ?
ಗುಡ್ಡದೋರೆಇಂದಿಳಿವ ತಿಳಿ ಝರಿಯ ಸುಧೆಗೋ ?
ಓ ನಿಮ್ಮ ತಿಳ್ಳಿಯಾಟ ತಿಳಿಯದೇಕೊ!

ಎನಿತು ಸೊಗಸಿನ ಇರವು! ಜೀವ ಪಾವನವು!!
ಅರಮನೆಯ ಆ ವಾಸ ಇದಕೆ ಇನ್ನೇನು?
ಮಾರುತನು ತೂಗುವಾ ಟೊಂಗೆಯೊಳು ನಿಮ್ಮ ಬಿಲವ
ಎತ್ತರದ ಮನೆಯಲ್ಲೂ ನಿಮ್ಮ ಇರವೇನು!

ಚಿಕ್ಕ ಒಡಲಿನ ಮೇಲೆ ಕಿರಿಯ ರೆಕ್ಕೆಗಳಿಹವು
ಏನು ಗಾರುಡಿ! ಅಂದದುಕ್ಕೇನು, ಜಂಭವೇನು!
ಹಾರುತೆ ಗಾಳಿ ಬಯಲೊಳಗೆ ಆಡುವ ನೀವು,
ಸಗ್ಗ ಜೀವಿಗೂ ನಿಮಗೂ ಅಂತರವೇನು?

ಮುತ್ತಿನುಂಡೆಯ ಕಾಳೇ ನಿಮ್ಮ ಆಹಾರವು
ಹಾ! ಎನಿತು ಸವಿಯಹುದು ನಿಮ್ಮ ಬಾಳು!
ಹಾಲ್ಗಾಳು-ಸಜ್ಜೆ-ಕಡಲೆ-ಹೆಸರು ನಿಮ್ಮವು
ಈ ಸೃಷ್ಟಿ ಸೌಖ್ಯ ಇನ್ನಾರಿಗೆ ಹೇಳು

ನಿಮ್ಮ ಮೆಲುಧ್ವನಿಯಲಿ ಮೆಲ್ಲುವಿರಿ ಕಾಳನ್ನು
ಗುಬ್ಬಿಗಳೋ ನೀವು ? ಅಬ್ಬ ನಿಜವು!
ತಾಯ ಗುಟುಕಿನ ಕಾಳ್ಗೆ ಬಾಯ್ದೆರೆಡುವ ಮರಿಯನ್ನು
ನೋಡಬೇಕು; ಕಣ್ಣಿಗೆಂತ ನುಣ್ಣಬ್ಬವು!

# ಹಿತೋಕ್ತಿಗಳು

ಕಾಲು ತಾಗಿದ ಮುಳ್ಳು ; ಮೈಯಲ್ಲ ಮುರಿಯುವದು ।
ಕಾಯ ತಾಗಿದ ಮುನಿಸು; ಮನವೆಲ್ಲ ಮೆಲ್ಲುವದು ॥

ಇಂದಿಲ್ಲ ನಾಳಿಲ್ಲ ಎಂಬೊಂದು ಕುಂದಿಲ್ಲ ।
ಭವಹರನ ನೆನೆದೊಡೆ ಎಂದೆಂದು ಭಯವಿಲ್ಲ ॥

ಹಾ ತಡೆ ತಡೆ ಓಡದಿರು; ನೋಡು ಮುಂದಿದೆ ತಗ್ಗು ।
ಓ ತಡೆ ತಡೆ ದುಡುಕದಿರು; ನೋಡು ಮುಂದಿದೆ ನುಗ್ಗು ॥

ಎಲೆ ಸುಣ್ಣೆ ಓ ಸುಣ್ಣೆ; ಕುದಿಯುತಿಹೆ ನೀ ಬಿಳಿ ಬಣ್ಣ ।
ಬಲೆ ಹೆಣ್ಣೆ ಓ ಹೆಣ್ಣೆ; ಜಗವಳಲಾದ ನೀ ಬಲು ಬೆಣ್ಣೆ ॥

ನಂಬದಿರು ನೀರಿನಾಳವ, ಬೂದಿ ಮುಚ್ಚಿದ ಕೆಂಡವ ,
ಮೋಡ ಮುತ್ತಿದ ಮುಗಿಲ, ಸುಳ್ಳನಾ ಸವಿ ನುಡಿಯ ॥

ನಾನೆಂದು ನುಡಿಯದಿರು ನೀ ಜಂಭದಾ ಹುಂಜದಂತೆ ।
ನಾಕಾರವಳಿದು ನಿಜಾತ್ಮನಾಗು ನೀ ನೀಲಕಂಠನಂತೆ ॥

ಹುಲ್ಲುಂಡು ಹಾಲ್ಗರೆವ ಹಸುವಾಗು ನೀ ನಿಜದಿ ।
ಹಾಲುಂಡು ವಿಷಸುರಿವ ಹಾವಾಗದಿರು ಜಗದಿ ॥

# ಕವಿ

ಕವಿಯ ಹೃದಯ; ಕವನದುದಯ
ಸವಿಯ ರಸವು; ದೇವನೊಲವು
ಓ ಅವನ ಹೃದಯ ಕಲೆಯು
ಆವ ಲೀಲೆಯೋ ಕಾವ್ಯದೊಲವು

ಎಲ್ಲ ಕಲೆಗಾರನಹುದು ಕವಿಯು
ಇವನ ಮನವು ಸ್ವೈರ ಮನೆಯು
ಹರುಷ ಹೊರಸು ಹೆಣೆವ ಕಲೆಯು
ವಿರಸ ಹೊನಲು ತರುವ ಕವಿಯು

ಅವನ ಉಕ್ತಿ ಓಟ; ಓ ಹೃದಯ ಶಲೆ!
ಕಾಣದದನು ಕಾಣ್ಬ ದಿವ್ಯದೃಷ್ಟಿ
ಅಂಮೃತದಾ ವೃಷ್ಟಿ, ಅದ್ಭುತದಾ ಲೀಲೆ
ವೈಚಿತ್ರ್ಯಮಯವವನ ಸೃಷ್ಟಿ

ಅವನ ಆ ನೋಟ ಅರಿಯದಾ ಮಾಟ
ಅದಾವ ಲೋಕದಿಂದಿಳಿವ ಸರಸ ರಸ!
ಹೇಗೋ ಎನಿತೋ ತರುವನವನಾಟ
ವರ್ಣ ಹೊದಿಸುವದು ಜಗಕೆ ಹೊಸ

# ಜೀವನ ಗಾಡಿ

ಗಾಡಿ ಓಡುತಿದೆ; ಅಕೋ ತಡೆಯದೆ
ದುಡುಕುತಿದೆ ತಾ ಮುಂದಿನ ಎಡೆಗೆ
ನಡುಹಗಲೆನ್ನದೆ; ಚಳಿಬಿಸಿಲೆನ್ನದೆ
ಓಡುತಿದೆ ಅಕೊ ಹೊಸಬಾಳುವೆಗೆ

ನಿಲ್ವನೆಗಳಲಿ ನಿಲ್ಲುತ ನುಗ್ಗುತಿದೆ
ತನ್ನಯ ನಿಯಮವ ಮಾಡುತಿದೆ
ಬಂದವರೆನ್ನದೆ ಇಳಿದವರೆನ್ನದೆ
ಮುಂದಿನ ನಿಲ್ವನೆ ಮುಟ್ಟುತಿದೆ

ಹತ್ತುವರೆಷ್ಟೊ ಇಳಿವರದೆಷ್ಟೊ
ಹುಟ್ಟು ಸಾಯುವವರೆಷ್ಟೆಷ್ಟೊ
ಮಂಗಲ ವಿಧಿಗೆ; ದುಃಖದ ಬದಿಗೆ
ಹಿಗ್ಗುತ ಕುಗ್ಗುತ ನಡೆವವರದೆಷ್ಟೊ

ಮೇಲ್ತರ ಡಬ್ಬಿಗೆ ಸಿರಿವರ ಜೀವನ
ಕೆಳದರ್ಜೆಗೆ ಬಡವರ ವಾಸನ
ಬಡಬಲ್ಲಿದರ ಸಮರಸದಸಿಫೊಲ್
ಶಿಳ್ಳು ಹಾಕುತಿದೆ ಜೀವನಗಾಡಿ

ಯುಗ ಯುಗ ನಡೆಯುತಿದೆ ತಾ
ಯುಗದಾ ನಿಲ್ವನೆ ಮುಟ್ಟುತಿದೆ
ಯುಗಭಯಂಕರ ಪ್ರಳಯದ ನಡುವೆ
ಇಳಿವರು ಏರ್ವರು ಹೊಸ ಬಾಳುವೆಗೆ

# ಅಡುಗೆಯು ಮನೆಯು ನಾಟ್ಯ !

ಅಡುಗೆ ರಸರುಚಿ ವಾಸನೆಯು ಮೋಹ ಸವಿಗೆ
      ಬಾಗದವನಾರು ಹೇಳು ?
ಕುರಿಯ ಕಾವ ಕುರುಬನೀಂ; ಧರೆಯ ಕಾವ ರಾಜಗೆ
      ಪಕ್ವಾನ್ನ ನಾಕಕೆ ಅನ್ಯ ಕೇಳು

ಮೊಸರನ್ನ ಸಂಡಿಗೆ ಉಪ್ಪಿನಕಾಯು ಲೀಲಾಂಮೃತಕೆ
      ಸಖ್ಯನಾಗದವನಾರು ಧೀರ ?
ರಣರಂಗ ಕಲಿಯೇನು; ಕಾಳಗದ ಹುಲಿಯೇನಿದಕೆ
      ವಿಶ್ವ ಅಡುಗೆ ಶಾಲೆಗೆ ಕಿಂಕರ!

ಹಂಚಿನೆಣ್ಣೆಯ ಕೆರೆಯಲಿ ಚಕ್ಕುಲಿಯು ಈಸಾಟ
      ಕಂಡ ಬಾಯ್ಗೆಲ್ಲ ಕುಣಿದಾಟ
ಒಲೆಯು ಕೆಂಡದ ಮೇಲೆ ಹಪ್ಪಳದ ಚಲ್ಲಾಟ
      ಉಂಡ ನಾಲ್ಗೆಲ್ಲ ಜಿಗಿದಾಟ

ನಯನ ಹೋಳಿಗೆ ಕಂಪು; ಮಾಡುವದು ಹೋಂಪುಳಿ
      ಬಿಸಿ ಕಡಬು ತುಪ್ಪ ಸಾಕು!
ಬೆಣ್ಣೆ ಮಜ್ಜಿಗೆ ತರುವ ಕಡಗೋಲಿನಬ್ಬರ ಕೇಳಿ
      ಬಾಯಿ ನೀರಾಗಲೇ ಬೇಕು

ದಪ್ಪಚಪಾತಿಯ ಮೇಲೆ ಕಡಲೆಯುಸುಳಿಯ ಮೇಲ್ಮೆ
      ಮೊಸರು ಸುರಿಯಬೇಕು
ಸರ್ವರಸಾನ್ನಗಳ ಕೂಟ; ಕೈ ಬಾಯಿಗೆಲ್ಲ ಒಲ್ಮೆ
      ರುಚಿಯೂಟ ನೋಡಬೇಕು

# ಶರಣ ಪಥ

ಎಣ್ಣೆ ದೀವಿಗೆ ಹಿಡಿದು ಪಥವನರಸುವ ವೀರ
ತಿಳಿಯಲಾರೆಯಾ ತಿಂಗಳನ ಬೆಳಕು ?
ಸವಿಯ ತಂಗಿರಣ ಛಾಯೆಗಂಜಿಹುದು ತಿಮಿರ !
ಬಾ ಇಲ್ಲಿ ಕಂಡಿಹುದು ದಿವ್ಯ ಬೆಳಕು!

ಭಕ್ತಿಬಾನಿನ ತಿಲಕ ಚಂದಿರನು **ಬಸವಣ್ಣ**
ಆ ಶರಣ ಸಾತ್ವಿಕತೆಯ ಸವಿಯ ಬಾ
ಲಾಸ್ಯಲಾವಣ್ಯದ ಲೀಲಾ ಬಲೆಗೆ ನೀನು
ಬಲಿಯಾಗದೇ ಭಾಗ್ಯವರಸ ಬಾ

ಮಿಂಚಿ ಬಂದಿಹವು ಮಾಯಜಾಲದ ಹಕ್ಕಿಗಳು
ಬಣ್ಣ ಬಲುಚಂದ; ನಾದ ಅಂದ
ಹಿಡಿಯಲೆಳಸಿ ಬೆಂಬತ್ತಿದೊಡೆ ಬಾಳು ಹಾಳು
ಕೇಳಿ ತಿಳಿದೇಳು ಶರಣರಿಂದ

ಶ್ಯಾಮವರ್ಣದ ಮಾಯ ಮುಗಿಲಿನಲಿ ಮಿಂಚಾಗಿ
ಚಿಮ್ಮಿಯದ್ದಳದೋ **ಮಹದೇವಿಯಕ್ಕ**
ಕಾರಿರುಳ ಕರಗಿಸಿ ಸಿಡಿವ ಕಡು ಸಿಡಿಲಾಗಿ
ಬಡಿದಳದೋ ಕಾಡಿಗೆ ಎಮ್ಮ ಭಾಗ್ಯದಕ್ಕ

ಸತ್ಯ ಮಿಥ್ಯದ ಘೋರ ರೌದ್ರ ರಣವು
ಬೆಳಕು ಕತ್ತಲೆಯ ವೀರ ಬಣವು
ನಮ್ಮ ಶರಣವೃಂದದ ಭಕ್ತಿ ಕಹಳೆ ಕೂಗಿದವು
ಶರಣರಿಗಿದಿರಾದ ಅಸುರರಿನ್ನಾವು?

ಮೌಢ್ಯ ಜಾಡ್ಯದ ಜಾಲ ಆವರಿಸಿ ನಿಂದಾಗ
ಬಂದರದೋ ಅವತಾರಿ **ಅಲ್ಲಮರು**
**ಕಲ್ಯಾಣ** ಮೇಲೆದ್ದು; **ಶೂನ್ಯಸಿಂಹಾಸನ** ನಿಂದಾಗ
ಕ್ರೌರ್ಯ ತಿಮಿರದ ರೌದ್ರ ಶಾಂತ ಮಾಡಿದರು

ಸಾಸಿರಕು ಮಿಗಿಲಾದ ಲಿಂಗದೇವನ ದೂತರು
ಬಂದು ನಿಂದಾಗ ಬಸವಳಿಪ ನೀನಾರು?
ದಾರಿಯರಿಯದ ನಿನಗೆ ಕಾದುನಿಂದಾಗ ಶರಣರು
ಎಣ್ಣೆದೀವಿಗೆ ಹಿಡಿವ ಧೀರ ಇನ್ನಾರು ?

## ಶಿವೆ

ಕರುಣ ಹರಿಸಿ, ದಾರಿ ತೋರಿ ತಾರಿಸೆನ್ನನು
ವರವ ನೀಡಿ, ನನ್ನ ತೀಡಿ ಮುನ್ನಡೆಸು ಇನ್ನು
ಓ ತಾಯೆ ನೀ ದಾಯೆ ಕಾಯೆ ಎನ್ನನು
ನಿನ್ನ ಹೃದಯ ಗಂಗೆ ಹರಿದು ಹರಸೆನ್ನ

ನಿನ್ನ ನಾರಿ ಹೃದಯುವಹುದು ಕಮಲ
ನನ್ನ ಮನವು ಇಹುದು ತುಮುಲ ತಾಕಲಾಟ
ಚನ್ನ ಚಲುವ ಚಿನ್ನದಾ ನಿನ್ನೊಡಲ
ತಡೆಯದೇ ಇಳಿದು ಅಳಿಯಲೆನ್ನ ಭವಮಾಟ

ಶರ್ವಾಣಿ ನೀ ನಿನ್ನ ತ್ರಿಶೂಲ ತಿಮಿರ ತಿವಿಯಲಿ
ಶಿವೆ ನೀ ನಿನ್ನ ಶಕ್ತಿ ಈಯಲೆನಗೆ ಚರಮ ಮುಕ್ತಿ
ಆವ ಪಾಪ ಪಾಶವೇನು ಘಾಸಿಮಾಡದಾಗಲಿ
ಪರಮ ಪವಿತ್ರೆ ನಿನ್ನ ಪಾದಪದ್ಮಗಳಿಗೆನ್ನ ಭಕ್ತಿ

## ಚಲುವ ಬುಗ್ಗೆ!

ಹುಲ್ಲೊಳು ಹಾವಾಗಿ, ಹಾವಿಗೆ ಹೆಡೆಯಾಗಿ
ಹರಿಯುತಿದೆ ಚಲುವ ಗಂಗೆ!
ಹಸುವಿಗೆ ಕರುವಾಗಿ ಮೊಲೆಗೆ ಹಾಲಾಗಿ
ಕರೆಯುತಿದೆ ಸರ್ಗ ಗಂಗೆ!

ಶಿವನ ಜಟದಿಂದ; ಹಿಮದ ಶೃಂಗದಿಂದ
ಇಳಿಯುತಿದೆ ಸೊಗಸು ಇಳೆಗೆ.
ನದಿಯ ನೋಟವು; ಓಡುವಾ ಚಲುವಿಂದ
ನುಸುಳುತಿದೆ ಬಾಳ ಸವಿಗೆ

ಕಲ್ಲುಸಕ್ಕರೆ ಹರಳು ಉರುಳಿ ಬಂದಾಗ
ಎಳೆಯ ಮುದ್ದುಗಳಾನಂದದಿ
ಸಗ್ಗಸೊಗಸೆಲ್ಲ ಭುವಿಗೆ ಇಳಿದಾಗ
ಮಕ್ಕಳಃ ಕುಣಿವವು ಸಾನಂದದಿ

ಬಾಲ ಮೂಡಣ ರವಿಯು ಆಡಲೆಂದಾಗ
ಚಲುವುಕ್ಕಿ ಕೈ ಮಾಡಿ ಕರೆದಿತ್ತು
ಬಾನಂಚಿನಲಿ ಮುಗುಳು ನಗುವಾಗ
ಹರ್ಷರಂಗಿನೀಂ ಕೆಂಪು ಮೂಡಿತ್ತು

ಬಾಳಿಯ ಸುಳಿಯಾಗಿ, ಎಳೆಯ ಎಸಳಾಗಿ
ಅರಳುತಿದೆ ಸೊಗಸು ಮೊಗ್ಗೆ
ಲೀಲೆ ಜಗವಾಗಿ; ಜಗವು ರಸವಾಗಿ
ನೆಗೆಯುತಿದೆ ಚಲುವ ಬುಗ್ಗೆ!

# ಗರ್ಭವೈಚಿತ್ರ್ಯ ?

ಅಪಾವ ಲೀಲಾಜಾಲ ಮಾಯೆ ಮುಸುಕು!
ಬಲೆಯೋ, ಭವಣೆಯೋ, ಬಣ್ಣ ಜೀವನ ವರ್ಣವೈಚಿತ್ರ್ಯವೋ ?
ಕನಸು ನನಸಿನ ನೋಟ; ಮಿಂಚದಾ ಬದುಕು!
ಇಹ—ಪರ ಪಾತಾಳಗಳ ಬಗೆಯು ಅರಿಯಲಸದಳವೋ ?

ಭುವಿಯನೇ ಹೆತ್ತು, ನೀರು ಜೀವವ ಇತ್ತು
ಅನಿಲ ಅನಲರ ತೆತ್ತು; ನಮ್ಮ ನಿತ್ತ ತಂದೆ ಇರುವರಾರು ?
ವಿಶ್ವಗರ್ಭವೈಚಿತ್ರ್ಯವಾವಿರ್ಭವಿಸಿದಾರ ಸೊತ್ತು?
ಸುತ್ತುತಿದೆ ಸರ್ವಸ್ವ, ಸರಿಯುತಿದೆ ಸಮಯ; ಹಿರಿಯರಿದಕಾರು?

ಆಚಿನಾಚೆಯ ದಿಶೆಯ ಉರಿಯ ರವಿಯಾರು?
ಏನಿದೀ ಒಳಸಂಚು. ಅರ್ಥ ಅರಿಯದ ನೀಲವ್ಯೋಮವು !
ವೈಚಳಕವೆನಿತು ? ಸೂತ್ರವಿಡಿದವರಾರು ?
ಬೇರು ಇಲ್ಲದ ಕಾಂಡ, ಮೂಲವಿಲ್ಲದ ಶಾಖ ಜಗದೊಳಾವು ?

ಹಗಲಿರುಳು ಯುಗ ಯುಗಕೆ ಮುಗಿಯದೇ
ತಿರುಗುತಿಹನದೋ ತಿಂಗಳನು! ತಿರುಗಿ ಮಾಡುವನೇನು?
ಹೆಣೆದು ನಿಂತಿಹವು ಚುಕ್ಕೆಗಳು ಬಾಡದೇ!
ಅದ್ಭುತ ಬ್ರಹ್ಮಾಂಡ ಭ್ರಮೆಯೋ ನೈಜವೋ, ತಿಳಿಯದೇನು

ಜೀವರಾಶಿಯ ನಾಟ್ಯ ಸಾವಕಂಟಿಹುದು
ನಾವಳಿದು ಮುಂದೇನು? ಜನ್ಮಕಲ್ಪನೆಯಾಟ ನನಸೇನು?
ಏನಿದಗಮ್ಯನಾ ಕರ್ತನ ಕುಸಿರಹುದು!
ಸಾಸಿರ ವರ್ಣ ರಂಧ್ರದೀ ಕುಸುರು; ಅತೀತ ಅವ್ಯಕ್ತ ಉಸಿರೇನು ?

# ದೇಹ ತುಂಡಾಯ್ತು !

ಮುಂದೆ ಇಡುವ ಅಡಿಯು ಜಾರಿ
ಓಡಿ ಬರುವ ಗಾಡಿ ಹಾರಿ
ತುಂಬಿತೇನೋ ಕೆಂಪು ರಂಗು ದಾರಿ
ಹಾ ಬಿದ್ದ ಜೀವ ಉಸಿರ ಕಾರಿ !

ಬಾಳಿಗೆಲಿವ ಧ್ಯೇಯ ಬಲಿ ಆಯ್ತು
ನಲಿವ ಹೊಸ ದೀಪ ನಂದಿ ಹೋಯ್ತು
ಎಲುಬು ಮಾಂಸ ಸಿಡಿದು ಹೋಳಾಯ್ತು
ತುಂಬಿ ಬೆಳೆದ ದೇಹ ತುಂಡಾಯ್ತು !

ಹರೆಯ ಮಗನ ನಂಬಿ ನಡೆದ
ತಾಯ ಕರುಳು ಹಾಯ್ ಭಸ್ಮವಾಯ್ತು
ನೀರ ನಡುವೆ ನಲಿದು ನಡೆದ
ಬಾಳ ದೋಣಿ ಮುಳುಗಿ ಹೋಯ್ತು !

ಎದೆಯು ಒಡೆದು; ಗಾಡಿ ಓಡಿ
ಒಡಲ ಶೀಳಿ; ಜೀವ ಹೀರಿ
ಬೆಳೆವ ಬಾಳು ಹಾಳು ಮಾಡಿ
ಮೊಳಗಿತೇನೊ ಅಂತ್ಯ ಭೇರಿ !

ಆಳಲು ಉಕ್ಕಿ; ಕಡಲು ಕೂಡಿ
ಮುಸುಕಿತದೋ ಪ್ರಾಣ ಬೇಡಿ
ಎದೆಯು ಕೋಡಿ; ಮಣ್ಣು ರಕ್ತಮಾಡಿ
ಹರಿಯಿತಗೊ ಬಲಿಯ ನೀಡಿ !

ಸೆಳಕು ಮಿಂಚಾಗಿ ಹೋಯ್ತು ಸುದ್ದಿ
ತಾಯ ಹೃದಯ ಕರುಳ ತಾಕಿ
ಬೆಳೆವ ಮಗನ ನಂಬಿತ್ತು ಬುದ್ಧಿ
ಹಾಯ್ ಹೋಳಾಯ್ತು ವಿಧಿಯು ತಾಕಿ!

ಕಂಡು ಕೇಳಿ ಹಿಂಡು ಜನ ಕೂಡಿತು
ನೆಲಕೆ ಚೆರೆತ ರಕ್ತ ಕಂಡಿತು
ಕಣ್ಣು ಮನವು ಗುಂಗು ಹಿಡಿಸಿತು
ಅಯ್ಯೊ ವಿಧಿಯು ಕೆಡಿಸಿತು!

ನನಸು ಊಹೆ ಕನಸಿಗಾಯಿತು
ಮುದಿಯ ತಾಯ ಕರುಳು ಕೊಚ್ಚಿತು
ಬಂದ ನಿಂದ ಸಂದಣಿಯು ಮಂದವಾಯಿತು
ದೈವ ಬಿಡದೆ ಗುಡುಗ ಹಾಕಿತು !

## ಪಾರಿಜಾತ

ಇನಿತೊಂದು ವಾಸನೆಯ ನಿನಗಾರು ಇತ್ತರು ?
ನಿನ್ನ ಕಂಡವರೆಲ್ಲರ ಕೆಳೆಬೆಳೆಸಿ ಸೆಳೆಯಲು
ನಿನ್ನಯಾ ಮುಡಿಬಯಸುತಿರಲಿನಿಯರು
ಉನ್ನತದಲಿಹ ಮೃಡ ಬಿಡದೆ ಕೊಂಡೊಯ್ವನು

ನಿನ್ನಯಾ ಗಮಗಮಿಸುವಾ ಸೊಗಸನೀವ-
ಸುತ್ತು ತುಂಬುತಿಹ ಪರಿಮಳವು
ಅನಿಲನಾ ಒಡನೆ ಸುಳಿಸುಳಿದು ಬರುವಾಗ
ಎನ್ನನ್ನು ಮರೆಸಿತ್ತು; ನಲವಿನಲಿ ನಿಲಿಸಿತ್ತು

ನಿನ್ನಯಾಡಂಬರಕೆ ಮರುಳಾಯಿತೀ ಮನವು
ನಾನೇನು ನರನಹುದು! ನಿನಗಿದೇನು ?
ಆ ನೀಲಧರನೇ ನಿನಗಾಗಿ ಕರೆವಾಗ
ನಿನ್ನ ಬಲು ಜಂಭ ಹರನ ತಲೆಯೊಳಾಯ್ತು

ನಾನೇಕೆ; ಹರನೇಕೆ; ಅನ್ಯರಿನ್ನೇಕೆ ?
ಕಾನನದ ಸರ್ಪಗಳೂ ನಿನಗೆರಗಬೇಕೆ ?
ನಿನ್ನನ್ನು ಅರಸರಸಿ ಓಡಿಬರಬೇಕೆ ?
ನಿನ್ನಲ್ಲಿಯೇ ಸರ್ಪ ಬೀಡು ಬಿಡಬೇಕೆ ?

ಸತ್ವರೂ ಅಲ್ಲದೇ ರಜ ತಮಸರು
ತತ್ವಬಲ್ಲಾ ತಾತ್ವಿಕರು, ಯತಿವರರು
ತತ್ತರಿಪ ಕಾಮಿಗಳು, ನರಹರರು
ಮುತ್ತಿಹರು; ತಮ್ಮನ್ನು ಮರೆತಿಹರು

ಪಾರಿಜಾತವೆಂದು ತಾ ನಿನ್ನ ಹೆಸರೇ ?
ಪರಿಪರಿಯ ಪರಿಮಳ ನಿನ್ನ ಉಸಿರೇ ?
ಸುರನರಪಾಮರರು ನಿನ್ನ ಬಲೆಯಲಿಹರೇ?
ಪರಿಮಳದ ಆಗರವು ನೀ ಪಾರಿಜಾತೇ ?

# ದ್ವಂದ್ವದಾಟ

ತಂಗಾಳಿ ಬೀರಿದೆ, ಬಿರುಗಾಳಿ ಬೀಸಿದೆ
ಜಗವೆಲ್ಲ ನಲಿದಿದೆ, ಅಳುವಿನಲಿ ಮುಳುಗಿದೆ
ಗಗನ ಹೊಳೆದಿದೇ, ಮೇಘ ಮುತ್ತಿದೆ
ಮೊಗವೊಂದು ಬಾಡಿದೆ, ಮತ್ತೊಂದು ಅರಳಿದೆ

ಅತ್ತ ಮರಣ-ಇತ್ತ ಜನನ; ಇಳೆಯೊಳೆಲ್ಲೆಡೆ
ಕತ್ತಲಂತೆ ಬೆಳಕಂತೆ ಎರಡು ಕೂಡಿವೆ
ತುತ್ತೊಂದೆಡೆ ಹೊಟ್ಟೆಗಿಲ್ಲ, ಮೃಷ್ಟಾನ್ನವೊಂದೆಡೆ
ಅತ್ತ ಹಾಗೆ, ಇತ್ತ ಹೀಗೆ ಜಗವ ತೂಗಿದೆ

ತಾಮಸರು ನಿಂದಿಹರು, ಸುರಜನರು ಬಂದಿಹರು
ಕಿಕ್ಕಿರಿದ ಜಗತುಂಬ ಪುಣ್ಯಪಾಪಂತೆ
ಮುಕ್ಕರಿಪ- ಎಚ್ಚರಿಪ ಜನರೆಲ್ಲರಿಲ್ಲಿಹರು
ಇಕ್ಕೆಲದ ಜನವೆಲ್ಲ ಜಗವನ್ನೇ ಜೈಸಿದೆ

ಬ್ರಮ್ಹಚರ್ಯ-ಕಾಮಚರ್ಯ ಎಲ್ಲ ನಡೆದಿವೆ
ಸುತ್ತೆಲ್ಲಾ ರಣಕಹಳೆ, ನಡುವಿದೆ ಶಾಂತಿ ಹೊಳೆ
ಧರ್ಮ-ಕರ್ಮ-ದುಷ್ಕರ್ಮ ಕೂಡಿ ಬಾಳಿವೆ
-ಮಿಥ್ಯ ಎಲ್ಲ ಸೇರಿ ಸಮರಸದ ಜಡಿಮಳೆ

ದೇವಗುಡಿಯೊಂದು, ನಾಸ್ತಿಕ ನುಡಿ ಇನ್ನೊಂದು
ಬೇವು-ಬೆಲ್ಲ, ಶೀಗೆ-ಎಣ್ಣೆ, ಅಬ್ಬತಾಕಲಾಟವೆ
ನೀವು-ನಾನು, ನೀನು-ನಾವು, ಮೇಲು-ಕೀಳು ಎಂದು
ಅವನು ಹೊಲೆಯನಿವನು ಒಡೆಯ; ಅಳುವೆ-ಬಾಳುವೆ

ಪ್ರಳಯ, ನಾಶ, ದುಃಖ, ನರಕ ಸೊಕ್ಕಿನಿಂದ ನಕ್ಕಿವೆ
ಬೆಳವು, ಉಳಿವು, ಸಿರಿಯು, ಸರ್ಗ ಎಲ್ಲ ಉಕ್ಕಿವೆ
ಏಳು-ಬೀಳು, ದಿಬ್ಬ-ತಗ್ಗು, ಇರುಳು-ಹಗಲು ಸೇರಿವೆ
ಸೆಳೆದು-ಎಳೆದು ಜನವನೆಲ್ಲಾ ಕಾಡಿ-ನೀಡಿ ನೋಡಿವೆ

## ಬಡಗಣ ಗಾಳಿ

ಬಡಗಣ ದೆಡೆಗೀಂ
ತೆಂಕಣ ದೆಡೆಗೆ
ಓಡುತಿದೆ ಗಾಳಿ
ತಾ ಮಾಡುತಿದೆ ಧಾಳೀ

ಕಣ್ಣಿಗೆ ಕಾಣದೇ
ಮಾಯದಿ ಮುಸುಕುತ
ಆಡುತಿದೆ ಗಾಳೀ
ತಾ ಮಾಡುತಿದೇ ಧೂಳೀ

ದಣಿದಿಹ ದೇಹಕೆ
ತಂಪಿನ ಕಂಪನು
ತುಂಬುತಿದೇ ಸುತ್ತೀ
ಹರ್ಷವ ತಾನೆತ್ತೀ

ಒಂದುಪಕಾರವ
ನಮ್ಮಿಂದರಿಯದೆ
ಜೀವನವೀಯುತಿದೆ
ಮನವನು ಸೆಳೆಯುತಿದೆ

ಬತಗಣ ಬನದಲಿ
ಓಡುತ ಬರುತಲಿ
ತೆಂಗಿನ ತೆಂಗಣ
ತಾ ದಾಟುತಿದೆ

ತೆಂಗಿನ ಗರಿಯೊಳು
ಸೋಂಕುತ ಭರದಲಿ
ತುಂಬಿದ ಬನದೊಳು
ತಾ ಸೊಂಯ್ ಗುಟ್ಟುತಿದೆ

ವಿಶ್ವದ ಅಶ್ವವು
ವಿಶ್ವದ ಕಕ್ಷದಿ
ಉರುಳುತ ಓಡುತಿದೆ
ತಾ ತಿರುಗುತ ಉರುಳುತಿದೆ

# ಸ್ಮಶಾನದಲ್ಲಿ!

ನೋಡಲ್ಲಿ ತಲೆಬುರುಡೆ ನೆಲವ ಮೇಲಲ್ಲಿ !
ಆಗಿಹುದು ಗೋಲ್ ಚೆಂಡು ಗೊಲ್ಲ ಬಾಲರಿಗೆಲ್ಲ.
ಬೆಳೆದು ಬಾಳಿಹ ಅಸ್ತಿ ಅದೋ ನಾಯ ಬಾಯಲ್ಲಿ !
ಒಲವು ಗೆಲವಿನ ಬಾಳು ಮೂಕವಾಗಿಹುದಲ್ಲ !

ಓ ವೀರ ಕಾಣಿದೋ ಜೀವನಾಂತ್ಯವಿದೆಲ್ಲ !
ಆಗೋ ಆ ಗೋರಿ ಬರಿಯ ಸುಣ್ಣದ ಮಾರಿ !
ನಲಿದ ಜೀವನ ನಾಟ್ಯ ಮೌನವಾಗಿಹುದಲ್ಲ !
ಅಂತಿಮದ ಈ ದಾರಿ ನಮಗೆಲ್ಲ ಕೇರಿ !

ರಣಹದ್ದು ಸ್ವಾನಗಳ ಘೋರರವವು ;
ಹರಿದು ತಿನ್ನಲೋ ರಕ್ತ ಮಾಂಸವನ್ನು ?
ರೌದ್ರ ಜೀವನಧರ್ಮದಿದೋ ಮರ್ಮವು
ಕಣ್ಣು ತಿಳಿಮಾಡಿ ಕಾಣಿಲ್ಲಿ ಮಾಯ ಬಗೆಯನ್ನು

ಏರಬೇಕೆಲ್ಲರೀ ಕೊನೆಯ ತೇರನ್ನು
ಹಿರಿಯ ಕಿರಿಯರೆಲ್ಲರ ಬೀಡು ಈ ಮಣ್ಣ ಗೂಡು !
ಸಿರಿತನದ ಲಾಸ್ಯ ಲಾವಣ್ಯ ಕಲ್ಯಾಣದಿರವನ್ನು
ಕರೆದಿಹುದು ಮಳೆಗಾಳಿ ಚಳಿಯ ಈ ನಾಡು

ಮಾಯಜಾಲದ ಸವಿಗೆ ಮುತ್ತನಿತ್ತಿಹ ಧೀರ !
ಬಾ ಇಲ್ಲಿ ಅರಘಳಿಗೆ; ನಿನ್ನ ಜೀವನ ಸೂಡು !
ಹರುಷದಾ ಬದುಕು ಈ ಮಣ್ಣ ಶೃಂಗಾರ !
ಬಾಳ ಬಾನಿನ ಬಯಕೆಯನಿಲ್ಲಿ ತೋಡಿ ನೋಡು !

# ವೃಷ್ಟಿಕಾಲ

ಗಗನ ಹರಿದು, ಭೂಮಿ ಮೆರೆದು; ಹಚ್ಚ ಹೊದಿಕೆ ಹೊದ್ದಿತು
ಮುಗಿಲು ಮುತ್ತಿ; ಇಳೆಯನಪ್ಪಿ ಸಗ್ಗ ಸೊಗವ ಜೈಸಿತು
ಕೃಷಿಯು ಕಾಮಧೇನು ತಾನು ಹರುಷದಿಂದ ಕರೆಯಿತು
ಹಸಿದು ಬಿರಿದ ಧರೆಯು ಹೊಟ್ಟೆ ಹೊಳೆದು ಕಾಂತಿ ತಾಳಿತು
ಸಗ್ಗಹೊಳೆಯು ಅಗ್ಗವಾಗಿ ಹಿಗ್ಗಿನಿಂದ ನುಗ್ಗಿತು
ಧಗಿಪ ದಾವಾಗ್ನಿಯಲ್ಲಾ ಭಗ್ನಗೊಂಡು ಕುಗ್ಗಿತು
ನಗುತ ವಿನಯ ಗಗನ ಮೊಗ್ಗು ಸೊಬಗಿನಿಂದ ಅರಳಿತು
ತಗ್ಗಿ ಬಗ್ಗಿ ಕುಗ್ಗಿ ನಿಂತ ಚಿಕ್ಕಪೊದೆಯು ಚಿಗುರಿತು
ಹರುಷ ತುಂಬಿ ಹೊಟ್ಟೆಯುಬ್ಬಿ ಹೊಡೆಯು ಮೇಲೆ ಎದ್ದಿತು
ಒಡಲ ಒಡೆದು ಮೇಲೆ ನೆಗೆದು ಗಗನವನೇ ಕೆಣಕಿತು
ಹೊಡೆಯು ಹಾರಿ ಹೂವ ತೋರಿ ಹಾಲ್ಗಾಳು ತುಂಬಿತು
ಗಾಳಿ ಓಡಿ ತಲೆಯು ತಾಕಲಾಡಿ; ಕವಿಯ ಮಂಕು ಮಾಡಿತು
ಅಗೋ ಹುಡುಗ ಬಂದ ತುಡುಗನೆಂದು ಹಣ್ಣು ಅಡಗಿತು
ಹಸಿರ ಎಲೆಯು ದೇಟನಡಿಗೆ ಅಡಗಿ ಇಣಕಿ ನೋಡಿತು
ಕಲ್ಲನೆಸೆದ ತುಂಟನೆಂದು ಟೊಂಗೆಯಲುಗಿ ನಡುಗಿತು
ಎಲ್ಲ ಚಲುವು ಚಿಮ್ಮಿ ಚದುರಿ ಚಂದದಿಂದ ಕಂಡಿತು
ಗಗನ ಯೋಧಗಾಗಿ ನವಿಲು ಗರಿಯನುಚ್ಚಿ ಕುಣಿಯಿತು
ಕೇಕೆ ಹಾಕಿ ನೆಲವ ನೂಕಿ ಕುಣಿತದಿಂದ ದಣಿಯಿತು
ವೃಷ್ಟಿ ಒಲಿದು ವಿಜಯ ಗೈದು ಭೂದೇವಿ ಕೂಡಿತು
ಸುತ್ತು ಸೃಷ್ಟಿ ಚಲುವನೆತ್ತಿ ಜಗವ ಬೆರಗುಗೊಳಿಸಿತು

# ಹಾರಲಿ ಹೃದಯ!

ಹಾರಲಿ ಎನ್ನಯ ಹೃದಯವು ಬೀಸಿ
  ಭೂಮಿಯನೇ ಒಡೆದೂ, ಅಹ್ಹಾ ಇಹವನ್ನೇ ಒಗೆದು
ಭೂಮಿಯ ಭೇದಿಸಿ, ಗಗನವ ಛೇದಿಸಿ
  ಸತ್ಯದಲೀ ಮಿಂದೂ; ಓಹೋ ಹೊಸ ವಿಶ್ವವ ತಂದು

ಮನಸಿನ ಓಟದಿ, ಮಿಂಚಿನ ನೋಟದಿ
  ಗಗನವನೇ ಇಣಕಿ; ಅಬ್ಬಾ ತಾರೆಗಳಾ ಕೆಣಕಿ
ಈಶ್ವರನಾದ್ಭುತ ತಾಂಡವ ನಾಟ್ಯದಿ
  ಸರ್ವದೊಳು ದುಡುಕಿ; ನಾನೇ ನಿಜವನ್ನೇ ಹುಡುಕಿ

ಚಲ್ಲುವ ಕೈಗಳ ಅದ್ಭುತ ಮಾಟದಿ
  ನೀರೊಳು ಪ್ರಳಯವ ಜಗದೊಳು ರೌದ್ರವ ನಾಮಾಡಿ
ಓಡುವ ನವಿರಿನ ಕಾಲ್ಗಳ ಆಟದಿ
  ಕ್ಷಿತಿಜಕ್ಕೇ ಓಡಿ ; ಬಿಡದೇ ಸಂಜೆಯ ಸೂರ್ಯನ ಕಾಡಿ

ಗಿರಿಸೃಂಗಗಳ ಸರ್ರನೆ ಕೀಳುತ
  ಜಗವನ್ನೇ ಜಗಿದು; ಓಹೋ ಸಾಗರವನೇ ಕುಡಿದು
ಬರ್ರನೆ ಸರ್ರನೆ ಏರುತ ಹಾರುತ
  ವಿಶ್ವವನೇ ಮರೆದು; ವೀರ ಸತ್ಯದೊಳು ಬೆರೆದು

ನರಕದ ಮಧ್ಯದಿ ನಾಕವ ಕಟ್ಟುತ
  ಸತ್ಯವನೇ ಬಿತ್ತಿ; ಸವಿಯ ಶಾಂತಿಯನೇ ಎತ್ತಿ
ಕಲ್ಲನು ಕೆತ್ತುತ; ಶಿವರೂಪಾಗುತ
  ಸತ್ಯದ ಮುತ್ತನು ಹುಡುಕುತೆ ಕೂಡುವೆ ಚಿತ್ಶಕ್ತಿ

# ಗುರುಸಿದ್ಧರಾಜಯೋಗೀಂದ್ರರ ಲಿಂಗೈಕ್ಯ

ಅಳುವಿರೇಕೆ ನೀವು, ಬಿಸಿಯುಸಿರು ನಿಮಗೇಕೆ?
ಕಣ್ಣೀರು ಸುರಿಸುವಿರಿ. ಎದೆತುಂಬಿ ಕುಸಿಯುವಿರಿ
ಕಣ್ಣು ಕೆಂಪಾಗಿಹುದಲ್ಲ! ಇನ್ನಳವು ಏಕೆ ?
ಅತ್ತು ಬಿಗಿದಿವೆ ಕಂಠ, ಮರೆಯಿರಿದೋ ದುಃಖದುರಿ

ನಿಮ್ಮಳವು ನನಗಿರದೇ ? ಸಾವು ನಮ್ಮೆಲ್ಲರದು
ಮಣ್ಣು ಕೊಟ್ಟಿಹ ದೇಹ ಮಣ್ಣಿಗರ್ಪಿತವಹುದು
ಮಣ್ಣಿಗೆ ಮರೆತು ಅನ್ನುವೆವು 'ನಾವು' ಎಂದು
ದೇಹ ನಾವಲ್ಲ; ಮಣ್ಣಹುದು, ಮಣ್ಣು ಮಣ್ಣಿಗಾಗಿಹುದು

ನೀವು ಗಳಿಸಿದ ದೀಪ **ಮೂರುಸಾವಿರ** ದೀಪ
ಆ ದೀಪ ಕಿರಿಯುಹುದೇ? ಕೊನೆಯುಹುದೇ? ಹೇಳಿ
ಆರವಾ ದೀಪ **ಗುರುಸಿದ್ಧ** ನಂದಾದೀಪ
**ಗುರುಸಿದ್ಧದೇವ**ರಳಿದಿಲ್ಲ; ಅಳಿದುದವರ ದೇಹ ಕೇಳಿ

**ಗಂಗಾಧರ ವಾಣಿಜ್ಯ ವಿದ್ಯಾಲಯ**ದ ವಾಣಿಯುವರು
ಶಾರದೆಯ ವೀಣೆಯದೋ ನುಡಿಸಿತವರ ಕೃಪಾ ಸುಧೆ
**ಕಾಡಸಿದ್ಧೇಶ್ವರನೆ ಗುರುಸಿದ್ಧ**ನಾಶ್ರಯಿಸಿಹನು
ಆಶ್ರಿತನು ಬೆಳೆಯುತೆ; ಆಶ್ರಯದಾತನಳಿಯಬಹುದೇ?

ಕಿರಿಯರಿಗೆ ಹಿರಿಯರಿಗೆ ನೀಡಿತವರ ಕಾಮಧೇನು ಕರವು
ವಿದ್ಯೆಯನು, ಬುದ್ಧಿಯನು, ಪುಣ್ಯವನು ಧರೆಯೊಳು
ನಾವುಂಡ ಅಮೃತದಲಿ ಅವರಾತ್ಮ ಕಾಣುವೆವು
ಅವರ ತತ್ವ ಕಳೆ ಏರಿ ಬೆಳೆಯುತಿದೆ ಭುವಿಯೊಳು

**ಶಿವಯೋಗ** ದಿನದಂದು **ಗುರುಸಿದ್ಧ ಶಿವಯೋಗಿ**
ಶಿವನೊಳೊಂದಾಗಿ **ಗಂಗಾಧರ ಶಿವಯೋಗಿ** ರೂಪತಾಳಿದರು
**ಮೂರುಸಾವಿರ ಮಠದ** ಸರ್ವಭಕ್ತರಿಗೆ ಆಶೀರ್ವದಿಸಿ
ರಾಜೇಂದ್ರಯೋಗಿಯಂದೋ ನಿಜಸಾಕ್ಷಾತ್ಕಾರ ತೋರುತಿಹರು

## ಮಳೆ

ನೀಲ ವ್ಯೋಮ ಶಾಮವಾಗಿ; ಮುತ್ತುಕಾಳು ಉದುರಿ ಜಾರಿ
ಹಸಿದು ಮೌನವಾದ ಜಗಕೆ ಮಾತು ಕಲಿಸಿತು
ಗಗನ ಭೇರಿ ಧ್ವನಿಯ ಮಾಡಿ; ಮುಗಿಲು ಮುತ್ತಿ ಮಿಂಚುಕಾರಿ
ಸಲಿಲ ಸೋಂಪು ವೀಣೆ ಮಿಡಿಯಿತು

ರವಿಯು ಉರಿಯು ಬೆವರ ಭಾರ ನೆಲವ ಹಗುರು ಮಾಡಿತು
ಹಸಿ ಚಿಮ್ಮಿ ಹರ್ಷ ಹೊಮ್ಮಿ ಹೋಂಪುಳಿ ಮಾಡಿತು
ಸೃಷ್ಟಿ ಸವಿಯು ವೃಷ್ಟಿ ಕರೆಗೆ ಕೈಯ ಬೀಸಿತು
ಗಾಳಿ ಓಡಿ ಜಗದೊಳಾಡಿ ಈಜು ಬಿದ್ದಿತು

ವರ್ಷಕಾಲ ಕೊಳಲ ಗಾನ ಹರ್ಷಕಂಠ ಕೂಗಿತು
ರವಿಯು ಬಾಡಿ; ಸಂಜೆ ಮೂಡಿ; ಎಲ್ಲಿಗೋ ಓಡಿ
ಮಿಂಚು ಮಿನುಗು, ನಾದ ಗುಡುಗು, ಹನಿಯು ಕುಣಿಯಿತು
ಕಾಡು ನಾಡು ಗಗನಬೀಡು ಸಗ್ಗವನೇ ಮಾಡಿತು

ಲತೆಯು ಉಬ್ಬಿ ತರುವ ತಬ್ಬಿ ಹೂವುಕಾಯಿ ಸುರಿಸಿತು
ಮುಗಿಲದಾನ ಹಸಿರು ಶಾಲು ಸೃಷ್ಟಿ ಎಲ್ಲ ಹೊಚ್ಚಿತು
ಬೀಜ ಒಡೆದು, ಕುಡಿಗೆ ನೆಗೆದು ಚಲ್ವ ಚಿಗುರು ಕಂಡಿತು
ವಿಶ್ವವೆಲ್ಲ ನಲಿದು ನಿಂತು ಯೌವನವು ಹೊಮ್ಮಿತು

# ಸದ್ಗುರುವಿಗೆ

೧

ನಿನ್ನ ಹೃದಯದಂಗಳೊಳಗೆ
ಎನ್ನದೊಂದು ಅಂಗುಲಾ
ಎನ್ನದೆಲ್ಲ ಹೃದಯ ಬೇಗೆ
ನಿನ್ನ ಚರಣದೊಳು ಮಂಗಲಾ

೨

ಅದಾವ ಮಹಿಮೆಯಾ ಮಟ್ಟದಲಿ
ಯಾವ ತೆರದಿ ನೀನಿರುವಿ
ಆವವನ್ನರಿಯದವ ನಾನೇನು ಗೈಯಲಿ
ಓ ಸದ್ಗುರುವೆ ಕೇಳೆನ್ನ ಮನವಿ

೩

ಹಸುಗೂಸು ನಾನಿಹೆನು ಇನ್ನೂ
ತಿಳಿಯೆನಾಗಿಹೆನು ಮುನ್ನು
ಅರಿದಿಹೆನು ನಿಮ್ಮ ಚರಣವನ್ನು
ಅಳುತಿಹೆನು ಓ ಎಂದೆನ್ನು

೪

ಅಡಿಯನಿಡದಾ ಪುಟ್ಟ ಪುಟ್ಟು !
ನೀ ಪುಟ್ಟಾಣಿಯೆಂದು ಎತ್ತು
ಮುನ್ನಡೆಸು ನೀ ಮುದ್ದಿಟ್ಟು
ನಾನೊಂದು ನಿನ್ನ ಮುತ್ತು!

# ತಗಣಿಗಳೊಡನೆ ಮಹಾಯುದ್ಧ

ವೀರರೆಂಬವರಾರು ? ಶೂರರಿರುವವರಾರು ?
ಬನ್ನಿರೋ ಬಹು ಬೇಗ, ತನ್ನಿರೋ ನಿಮ್ಮ ಮಹಾಬಲವ
ಬಂದಿಹುದು ಮಹಾಯುದ್ಧದ ಮಹಾ ಉಸಿರು
ನೋಡ ನಿಂತಿಹರು ಸುರಗಣವೂ ನಿಮ್ಮ ರಣ ಛಲವ

ಮನೆ ಮನೆಗೂ ಮನ ಮನಕೂ ಹಾಹಾಕಾರ
ತಡೆಯದೇ ಬಿಡದೇಳಿ, ನಿಮ್ಮೆಲ್ಲ ಶೌರ್ಯ ತಾಳಿ
ಹೊಸೆದು ಹುರಿಮಾಡಿ ನಿಮ್ಮ ಮೀಸೆಯಾಕಾರ
ಖಡ್ಗ ಖಠಾರಿ ಢಾಲುಗಳೊಡನೆ ಮುಗಿಬೀಳಿ

ಸೊಡ್ಡು ಹೊಡೆಯಿರಿ ನೀವು ಕಾಳಗದ ಇದಿರು
ಮಿಂಚುವಾ ಖಡ್ಗದೊಡನೆ ಮಿಂಚು ನೀವಾಗಿ
ನಿಮ್ಮ ವೈರಿಗಳದೋ ಅಲ್ಲಿ ಅಡಗಿ ನಿಂತಿಹರು
ಕಾದಿಹರು ಕಾಳಗಕೆ; ಇರಿದು ಕೊಲ್ಲಿರಿ ರೇಗಿ

ಬಲುಜೋಕೆ; ಸಿಗರವರು ಬಹು ಬೇಗ
ಕಡಿದಾರು, ರಕ್ತ ಕುಡಿದಾರು! ಬಿಡಬೇಡಿರವರ
ನಿಲುವಿಗೆ ಕಿರಿದಾದರೂ ನಿಲುಕದಾ ವೇಗ
ಮೈಮರೆಯದೇ ಮುನ್ನುಗ್ಗಿ; ಹಿಡಿಯುಲವರ

ಹಗಲು ದಾಳಿಗರಲ್ಲ; ರಾತ್ರಿವೀರರವರು
ನಿದ್ರಿಸದಿರಿ, ನುಸುಳಿ ಬಂದಾರು; ಬಿಡದೆ ಕಾಡ್ಯಾರು
ನಿಮ್ಮ ಮೇಲೇರಿ ಬರಬಹುದು ಅವರು
ಆಯಾಸ ಆಲಸ್ಯ ಆತುರವ ತಡೆಯಿರಿ ನೀವೆಲ್ಲರು

ಮನೆ ಮನೆಯ ನುಗ್ಗ್ಯಾರು; ಬೀಡಾರ ಹಾಕ್ಯಾರು
ಗುಡಿಲು ಗುಂಡಾರ ಏನು; ಅರಮನೆ ಏನು
ಎಲ್ಲೆಡೆಗು ಹೊಕ್ಕಾರು; ಸುತ್ತೆಲ್ಲ ಮುತ್ಯಾರು
ಲೆಕ್ಕಿಸದೆ ಜನರ ನೋವು ದಣಿವುಗಳನು

ರಕ್ತ ಹೀರಿ ಕೆಂಪೇರಿದ ಜೀರಿಗೆ ಮುಖದವರು
ಏನವರ ಒನಪು ಒಯ್ಯಾರ; ಸುತ್ತೆಲ್ಲ ಜೈಸ್ಯಾರ
ವಿಷಮುದ್ದಿಗೂ ಸೋಲದ ರಿಪುತಂಡದವರು
ಇವರ ಸಂಹಾರವರಿಯದ ನಮಗೆಲ್ಲ ಧಿಃಕ್ಕಾರ !

## ಅರಿದೆನು ನಿನ್ನ

ಅರಿಯೆ ನಾನು; ದಾರಿ ತೋರೊ ಗುರುವರ
ಊರೂರು ತಿರುಗಿ ಕಣ್ಣೀರ ಕರೆದೆನು
ಆರಾರ ಗುರುತನ ದೊರೆಯಲಿಲ್ಲೋ ಹರ
ಪರಗುರು ನೀನೆಂದರಿದು ನಾ ಬಂದೆನು

ನಿನ್ನರವಿನ ಅನುಭವಾಂಮೃತವನು
ಎನ್ನ ಬಳಲಿದುದರಕ್ಕೆ ಬಡಿಸು
ನಿನ್ನುಳಿದು ಮುನ್ನ ನನಗಿನ್ನೇನು ?
ನೀ ನಿನ್ನ ಅಖಿಳ ಜೀವನವ ನಡೆಸು

ಎಲ್ಲಲ್ಲೊ ತಿರುಗಿದೆನು ನಿನ್ನರಿಯದೆ
ಆವಾವ ಪರಿಯಲಿ ನಾ ಕಾಡಿ ಬಂದೆನು
ಎಲ್ಲದೆಶೆಯೊಳು ನಿನ್ನನರಸುತ ಕರೆದೆ
ಹಲುಬುತಿರಲು ಹೃದಯ; ನಿನ್ನ ನಾ ಕಂಡೆನು

ನಾ ನಿನ್ನ ಕಂಡೆನೊ, ನೀ ಎನ್ನ ಕಂಡೆಯೋ ?
ನಿನ್ನದ್ಭುತ ಲೀಲೆ ವೈಚಿತ್ರ್ಯವೋ?
ನಾ ಶಿಲುಕಿದುದು ನಿನ್ನದೇ ಬಲೆಯೋ
ಓ ನಿನ್ನ ಚಕ್ರ ತಿಳಿಯಲಸದಳವೋ

ಹರ ನೀನು, ಹರಿ ನೀನು, ಎಲ್ಲ ನೀನು
ಆ ಅಲ್ಲಾ ಬುದ್ಧ, ಏಸು ನೀನೆ ನೀನು
ಒಡಕು ತೊಡಕಾಗಿರುವ ಜಗವಿದೇನು ?
ನಾನರಿದಿಹೆನು ಸರ್ವ ರೂಪಿಯೇ ನೀನು

# ಬಸವಣ್ಣ

ಹೃದಯ ಕಾಡಿನಲಿಹ ಹುಲಿಯು ನಾಡಿ ಮಿಡಿಸುತಲಿ
ಅಂತರಂಗದ ವೀಣೆ ನುಡಿಸ ಬಾ ಬಸವಣ್ಣ
ಕಾಡು ಈ ದೇಹದಲಿ ನಾಡ ಮೂಡಿಸುತ ತೀಡುತಲಿ
ಬೀಡು ಮಾಡ ಬಾ ಬೇಗ ಓ ನಮ್ಮೆಲ್ಲರಣ್ಣ !

ಹುಲಿತನದ ಛಲವಿದ್ದು ಇಲಿಯಾಗಿ ಇದ್ದಿಹೆವು
ಭಯದಿ ಮರೆತಿಹೆವು ನೈಜ ತೇಜವನ್ನು
ಮಿನುಗು ಮೆರಗಿನ ವರ್ಣ ವೈಚಿತ್ರ್ಯ ಮಾಯಪಾಶವು
ಗುಡುಗಿ ಘರ್ಜಿಸುತಿದೆ; ಬದುಕಲಾರೆವಿನ್ನು

ನಿನ್ನ ಸಾತ್ವಿಕತೆಯ ಓಜಸ್ಸು ಹೊಮ್ಮಿ ತೇಜಸ್ಸು ಮೂಡಿ
ಮುಗಿಲಿನಾಚೆಯ ರವಿಯು ಮಂದಾದನು
ಒಂದೊಮ್ಮೆ ನಿನ್ನ ವಚನ ವೃಷ್ಟಿ ನಮ್ಮೊಡಲ ಕೂಡಿ
ಓಡಿಸಿತು ಕವಿದ ಕಾರ್ಮೋಡಗಳನು

ದಿವ್ಯ ಜ್ಯೋತಿಯು ಹೊಲವು ಶರಣ ಛಲವು
ಸತ್ವ ಸಾತ್ವಿಕತೆಯ ನಾಂದಿ ಬಲದ ಮಂದಿರ ಭೇರಿ
ಮುಗಿಲು ಇಲ್ಲದ ಗಗನ ತಿಂಗಳನ ಇರವು
ಮಾಯೆ ಹೊದ್ದದ ಮನವು ವಿಶ್ವಾತ್ಮಿ ಪರಮಾತ್ಮನಕೇರಿ

ಶರಣ ಚರಣದ ವರ್ಣ ಬಸವಣ್ಣ ಹೇಳಿ
ಭವವೇಶ ಪಾಶವನು ನಾಶಮಾಡೆಮ್ಮ ತಂದನಿಲ್ಲಿ
ಸವಿ ತಿರುಳ ವಿಷ ಒಡಲ ವೈಚಿತ್ರ್ಯ ಹೇಳಿ
ನೈಜ ಜ್ಯೋತಿಯನಿತ್ತು ಬಾ ಇತ್ತ ಎಂದು ಕರೆದನಲ್ಲಿ

ಕಿರಿ ಹೃದಯ ಕಲ್ಮಿಷ ಘೋರ ಗವಿಯಲಿ
ನುಸುಳಿ ಬಂದೆಮ್ಮ ಕಿವಿಯೊಳುಸುರಿದ ವಚನವ
ಬಲ ಬಂಧನ ವ್ಯೂಹ ಝಾಡ್ಯದಲಿ
ಮೌಢ್ಯತೆಯ ಮುರಿದೊತ್ತಿ ಎತ್ತುವನೆಮ್ಮ ಬಸವ

ಹಗಲು ಶಖೆಯಾಗಿ ಇರುಳು ಭಯವಾಗಿ
ಮಾಗದಾ ಘಾಯ ಮಾಡಿಹುದು ಕಾಯಕಾಮಾಯ
ಮದ್ದು ಇನ್ನೆಲ್ಲಿ ? ಓ ಕಾಣದಾ ಯೋಗಿ
ಇಹುದು ಬಾರಲ್ಲಿ; ಬಸವ ನುಡಿಯಲ್ಲಿ ನೈಜ ಧ್ಯೇಯ !

ಚುಕ್ಕೆ ಲತೆಯಾಗಿ, ರವಿಯು ಫಲವಾಗಿ
ಹೂವು ಚಂದಿರನಾಗಿ, ನೆಲನೀರು ಶಾಮ ಮುಗಿಲಾಗಿ
ಮಿನುಗು ಮೆರುಗು ಜೀವನವು ಮಿಂಚಾಗಿ
ಹೊಂಚಿ ಸಿಡಿಲನು ಹೊಡೆಯುವದದೋ ಮಾಯಕೂಗಿ

ರೇಗಿ ಎದ್ದಿಹ ರುಚಿಗೆ ನೀಗಿ ಬಿದ್ದಿದೆ ಶಕ್ತಿ
ಬಲವಾಗು ಬಾ ಮೊದಲು ಹೃದಯ ಹದವಾಗಿ ಮಾಡು
ಜನ್ಮ ಸಾರ್ಥಕತೆಯೆ ನೈಜ ಮುಕ್ತಿ
ಆ ಮಾರ್ಗ ಬಸವಣ್ಣ ನುಡಿದ ವಚನ ನೋಡು

# ಮಲ್ನಾಡದ್ಸಿರಿ

ಎಳೆಬಿಸಿಲು ಸಂಜೆಯಾ ಮಲ್ನಾಡ ಗದ್ದೆಯಲಿ
ಹಸಿರು ಹುಲ್ಲಿನ ಮೇಲೆ ಒರಗಿದ್ದೆ
ಕಬ್ಬಿನಾ ಬದುವಿನಲಿ ಮಾವಿನಾ ಎದುರಿನಲಿ
ಸಗ್ಗ ಸೊಗಸನೆ ಈಂಟೆ ಕುಡಿದಿದ್ದೆ

ಚಲ್ಲಾಡುವಾ ಚಲುವಿನ ಭತ್ತದ ಎಳೆಯಾಟ
ಸೌಂದರ್ಯ ಭಾಷೆಯು ನುಡಿದಿತ್ತು
ಹೊಂಬಣ್ಣ ಹೊಳಪಿನ ಮಾವಿನ ಹೊಯ್ದಾಟ
ಕವಿಯ ಲೆಕ್ಕಣಿಕೆಯ ಕುಣಿಸಿತ್ತು

ಸವಿಗಾಳಿ ಸುಳಿವಾಗ ಎಲೆಗಳು ಅಲೆದಾಗ
ಉಲ್ಹಾಸನಾದವು ಕರೆದಿತ್ತು
ಗೊಲ್ಲರು ನುಡಿದಾಗ ಹಕ್ಕಿಗಳು ಉಲಿದಾಗ
ಮಲ್ನಾಡ ಹಾಡು ಹರಡಿತ್ತು

# ಓ ಮಾಯ ಬಿನ್ನಾಣ!

ಓಡುತಿದೆ ನೋಡಲ್ಲಿ ಎನಗಿಂತ ಮೊದಲಾಗಿ
ಕಣ್ಣೋಟಕೂ ಕಡೆಯಾಗಿ, ಮನದೋಟಕೂ ಮಿಗಿಲಾಗಿ
ಮನಮುಗಿಲ ಒಡಲಿನಾಚೆಗೆ ಹೋಗಿ
ನಿಂತು ನಿಲ್ಲದಲೆ, ಕಂಡು ಕಾಣದಲೆ, ಮಿನುಗು ತಾರೆಯಾಗಿ

ಸೌಂದರ್ಯ ಲಾವಣ್ಯ ರೂಪ ಯೌವನವೋ
ಕಂಠಕೋಗಿಲವಾಗಿ, ನವಿಲ ಚಲುವಾಗಿ, ಅಣಿಲು ಕುಣಿತಾಗಿ
ರುಚಿಯ ರಸವಾಗಿ ಪಕ್ವ ಚಲುವ ಮಾವೋ
ಇನ್ನು ಎನಿತು ಲೀಲಾ ನಾಟ್ಯ ಬೆಡಗು ಬಿನ್ನಾಣವಾಗಿ

ಉರಿಗೆ ನೆರಳಾಗಿ, ತೃಷೆಗೆ ಪಾನೀಯವಾಗಿ
ಕಾಮ ಬಾಣದ ರತಿಯಾಗಿ ಹರ್ಷವರ್ಷವಾಗಿಹುದು
ಉಬ್ಬಿದಾ ಗೊನೆಯಾಗಿ ಕುಸುಮದೆಸಳಾಗಿ
ಸೊಗಸು ಜಾಲ ಹೆಣೆಗೆ ಉಲ್ಲಾಸ ಉಯ್ಯಾಲೆಯಹುದು

ಕರೆದಿಹುದು ಕೈ ಮಾಡಿ ಓ ಮಾಯ ಬಿನ್ನಾಣ!
ಸರ್ಗಮರೆ ಸರ್ಗವೋ? ಸವಿಯ ಮರೆಯಿಹ ನರಕವೋ ?
ಅರಿಯಲಾರದು ತನುವ ಈ ಮಾಯ ಬಿನ್ನಾಣ
ನೈಜವೋ; ಗರ್ಭ ಒಡಲ ವಿಷವೋ; ತಿಳಿಯದೇನೆಲವೋ

# ಬೇಸಿಗೆ

ಕಡುಬಿಸಿಲ ಬೇಸಿಗೆಯು ರೌದ್ರರೂಪದ ಯುರಿಯು
ಝಳವಾಗಿ ಜುಳು ಜುಳನೆ ಇಳಿಯುತಿದೆ
ಜಲಧರನ ರಾಜ್ಯದಾಚೆಯಾ ಗಡಿಯು ರವಿಯು
ಸುರಿಸುವದೊ? ರಸವಲ್ಲ! ಬಿಸಿಲು ಉಸಿರಾಗಿದೆ.

ಕೆಂಡದಾ ಹೂವೊಂದು ಟೊಂಗೆ ಗಿಡವಿಲ್ಲದೆಯೆ
ಅರಳಿಹುದು; ತಾಪದಾ ಪರಿಮಳವ ಸುರಿಸಿಹುದು
ತನ್ನ ಬಣ್ಣವ ನೋಡಬಂದಿಹ ಜಗದ ಕಣ್ಣು ನೋಡದೆಯೆ
ಹೊರಳಿಹುದು; ಅನಿತೊಂದು ಆಟೋಪ ಬೀರಿಹುದು

ಮೋಡ ಮಾತೆಯರೆಲ್ಲ ಕಿರಿಯು ಕೂಸುಗಳೊಡನೆ
ಓಟಕಿತ್ತಿಹರು ಕ್ಷಿತಿಜದಾಚೆಯಾ ಗಿರಿಗೆ
ನೆರಳಿಲ್ಲ, ನೆಲವಿಲ್ಲ. ಬಳಲುತೆ, ಪೊರೆವರನರಸುತೆ
ತಾವೇ ನೆರಳನಿತ್ತಿಹರು ಬಸವಳಿಪ ಭೂದೇವಿಗೆ

ನೆಲ-ಕಲ್ಲು ಕಾದಿಹವು, ಗಿಡ-ಬಳ್ಳಿ ಬಾಯ್ಬಿಡುತಿಹವು
ಊರು-ದಾರಿಗಳೆಲ್ಲ ತಲೆತಿರುಗಿ ಬಿದ್ದಿಹವು
ಅರಿವಿಲ್ಲದಂತಿಹವು ಹಿರಿಕಿರಿಯ ಗಿರಿಗಳೆಲ್ಲವು
ನಲಿದು ನರ್ತಿಸಿದ ಭೃಂಗಗಳು ಮರೆಯರಸಿಹವು

ನಗೆಇಲ್ಲ, ನಲವಿಲ್ಲ ಉಲಿವಿಲ್ಲ, ಮೌನ ತುಂಬಿದೆ
ಅನ್ನ-ನೀರನು ಹಸಿದೊಡಲು ಹುಡುಕುತಿದೆ
ರಸಿಕ ರಸ ಸೃಷ್ಟಿ ಹರುಷ ಸುಖವೆಲ್ಲ ಅಳಿದಿದೆ
ಬಿಸಿಲ ಬೇಗೆಯು ನಾಟ್ಯ ಸುತ್ತು ನಡೆದಿದೆ

# ಎಲ್ಲಿಹನು ?

ಹರನ ನಾಮವ ಹಿಡಿದು ದಿನಬೆಳಗು ಹಾಡುವಿ
ಆ ಹರನು ಇನ್ನಾರು ತಿಳಿಯಲಾರಿ
ಹೃದಯ ಗಂಗೆಯ ಹೊಳೆಯಲ್ಲಿ ತೇಲಬಿಟ್ಟಿರುವಿ
ನಿಜಭಕ್ತಿ ತೊರೆದೀಶನನು ಕಾಣಲಾರಿ

ಹರನೆಲ್ಲಿ; ನೀನೆಲ್ಲಿ; ಅವನ ಹುಡುಕುವಿಯೆಲ್ಲಿ ?
ಅಹಂಕಾರದೊಳು ನೀ ಮರೆದು ಪೂಜಿಸಲು
ನಿನ್ನ ಪತ್ರಿ-ಪುಷ್ಪ-ಗಂಧವಾರ ಮುಡಿಯಲ್ಲಿ ?
ನಿರ್ಮಲ ಚಿತ್ತಬೇಕು ಪ್ರಭುವನರಿಯಲು

ಪೂಜೆಯಾಡಂಬರದಲಿ ಅಡಗದೇ ಆ ದೇವನು-
ಮೂಡಿ ಬೆಳಗುತಿಹನು ನಿನ್ನಂತರಂಗದಲ್ಲಿ
ಕರೆದಿಹನು ನೂರೆಂಟುಬಾರಿ ನಿನ್ನನವನು
ಓ ಗೆಳೆಯ ನೀ ಮೊದಲು ನಿನ್ನಾತ್ಮದಲ್ಲಿ !

ಸತ್ಯ-ಶಾಂತಿಯ ಹೊನಲು, ಪ್ರೇಮ-ತ್ಯಾಗದ ಕಡಲು
ಅಹಿಂಸೆಯೂ ಪಾವಿತ್ರ್ಯವಾಗಲಿ ನಿನ್ನ ಚಾರಿತ್ರ್ಯ
ವಿಷಯ ವಾಸನೆಯು ಬಿಗಿದ ಮನದ ಬಾಗಿಲು-
ತೆರೆದು ಹೃದಯವರ್ಪಿಸಲದೇ ಮುಕ್ತಿ ಸ್ವಾತಂತ್ರ್ಯ

ಈ ಎಲ್ಲ ಸಾತ್ವಿಕತೆಯ ಮಹಾ ತತ್ವದಲಿ ತೇಲು
ಅಲ್ಲಿ ಕಾಣುವಿ ಸುಖವ, ಪರಮ ಸಂಪದವ
ಗುಡಿಯೊಳುದ್ಭವಿಸಿದ ದೇವ ಹೃದಯದೊಳುಂಟೆನಲು
ಅಂಟದೇ ಬರಿಹೆಮ್ಮೆಗೆ ಹುಡುಕು ದೇವ ಪಥವ

# ಓ ಎನ್ನ ಸೋದರಿ !

ಓ ಎನ್ನ ಸೋದರಿ! ವೀರ ಭಾರತದ ನಾರಿ !
ಬಾ ಇಲ್ಲಿ ಹೊರಜಗಕೆ; ಶಾಂತಿ ಸಮತೆಯ ಎಡೆಗೆ
ಹೋಗುವಾ ನಾವೆಲ್ಲ ಗಗನ ಗಡಿಯ ಮೀರಿ
ಕರೆಯುತಿಹುದು ನೋಡಲ್ಲಿ ! ಬಾ ಭಾವಿನಾಡಿನೆಡೆಗೆ

ನಿನಗಂದರವರಾರು ಅಬಲೆ ನೀನಿರುವಿ ಎಂದು
ಅರಿಯಲಾರರೇ ಆದಿ ಅವತಾರ ಶಕ್ತಿಯಾರು ?
ಕೊರಸಿಗಳಾಟೋಪದಲಿ ಇದಿರಾದರಾರು ಅಂದು
ನಿನ್ನ ನೀ ತಿಳಿದು ಏಳು, ನಿನ್ನ ಆ ಹೃದಯವೆಮಗೆ ತೋರು

ಸಹನೆ ಸಹಕಾರ ಶಾಂತಿ ದೀಪ್ತಿಯ ಜ್ಯೋತಿ
ಹೃದಯ ತೈಲ ಹಾಕುತೆ ನಾಡದೀವಿಗೆ ಪ್ರಜ್ವಲಿಸಲಿ
ಎನ್ನ ಸೋದರಿ ನೀನು; ಕೂಡಿ ನಡೆ ಸುಮತಿ
ಭಾರತಾಂಬೆಯ ವೀರಮಕ್ಕಳ ಬಾಳು ಬೆಳಗಲಿ

ಮನೆಯ ಕೋಣೆಯ ಮರೆಯ ಸೆರೆಯಲ್ಲಿ !
ಒಲೆಯ ಮುಂದಣ ಝುಳವೆ ನಿನ್ನದೋ ನೆಲೆಯು ?
ನಿನ್ನ ಕಲೆಯಲ್ಲ ಬಲಿಯಾಗಿಹುದೇನು ಅಲ್ಲಿ
ಓ ನಿಲ್ಲದಿರು ನಿಂತಲ್ಲಿ, ಕೇಳದೋ ಭಾರತಿಯ ಕರೆಯು !

ಮಿಂಚಿ ಮೇಲೇಳು; ನಿನ್ನ ಹೃದಯ ಹೇಳು
ನಿನ್ನೊಳಡಗಿದ ಸತ್ವ ಸತ್ಯದಾಗರವನರುಹು
ಮನವನಾವರಿಸಿಹ ಅಬಲತೆಯ ಶೀಳು
ನೀನಹುದು ಭಾವಿವಾಣಿಯ ನಾಂದಿ ಜೀವನ ಕುರುಹು

# ನ್ಯಾಯ ನೋಂಪಿ

ನೈಜ ಶಿಲ್ಪಿ, ಸತ್ಯ ಕಲ್ಪಿ, ನಿಜಾತ್ಮ ರಕ್ಷಿ
ನಿತ್ಯ ಶಿವನು ಸತ್ವ ಪೂರ್ಣನು
ನ್ಯಾಯ ನಡೆಯು ಸ್ಥಿತಪ್ರಜ್ಞ ನಿಷ್ಕಲ್ಮಷಿ
ಜ್ಞಾನ ಜಲಕಲಾಸಿ ವಿರಕ್ತನು

ನೈಕ್ಷ ವೃಕ್ಷ ಬೀಜ ನೆಡದ ಸೊಗಸು ರೂಪಿ
ಜಾಡ್ಯ ತಿಮಿರ ಹೊದಿಕೆ ಅಳಿದ ವೀರನು
ವೈರವಳಿದು ವಿಮಲನಾಗಿ ನಡೆವ ನ್ಯಾಯ ನೋಂಪು
ಸತ್ಯ ಪುಂಗವ ಶಿವನ ಕಂಠಃ ಹಾರನು

ಕಾಮ ಚ್ಯುರುಚಿ, ಮಾಯ ಮುಸುಕು ಮೀರಿ ನಿಂದನು
ಮಿಥ್ಯ ಚೂರ್ಣಗೈದ ಚಲುವ ಚನ್ನೈದಿಲೆ
ನಿತ್ಯ ಶಕ್ತಿ ಪಂಜು ಹಿಡಿದ ಜ್ಯೋತಿ ಕಾಯನು
ನ್ಯಾಯ ನೋಂಪಿ ನಡೆವ; ನಕ್ಷತ್ರಮಾಲೆ

# ಮೇಲು—ಕೀಳು

ಬೇವು ವಿಷವಾದೊಡೆ ಅದರ ನೆರಳು ವಿಷವೇ ?
ಮಾವು ರುಚಿಯಾದೊಡೇನದರ ನೆರಳು ರುಚಿಯೇ ?
ಕೀಳು ಹೊಲೆಯನೆನಲು ಹಿರಿಮೆಗೆ ಸಾವೇ ?
ಸಿರಿವ ಸಿರಿಯಾದೊಡೇ ಶೀಲದಲಿ ಸಿರಿಯೇ ?

ತಿನಲಾಗದು ಬಲುಕೀಳು ಹುಲ್ಲೆನಲು ಸಲ್ಲುವದೇ ?
ಬಿಡಲಾಗದು ಸಿಹಿ ಕಬ್ಬೆನಲದನೆ ಮೆಲಬಹುದೇ ?
ಹೊಲೆಯು ಹೊಲಸೆನಲು ಮಿಂಗಿದೆಲ್ಲ ಹಸನವಹುದೇ?
ಶ್ರೇಷ್ಠ ಕುಲಜನಿರಲು ಮಾನವ ಕರುಳ ಕಾಣಲರಿಯನೇ ?

ಕೆಸರೊಳುದಿಸಿದ ಕಮಲ ಸಲ್ಲದೇ ಆ ಈಶ್ವರಗೆ ?
ನಿಲುಕದಾಕಾಶ ಮಲ್ಲಿಗೆ ಏಸು ಲೇಸಾದರೆ ಏಕೆ ?
ಹೊಲೆಯು ಕೀಳೆನಲು ಮಾನವತೆಗೆ ಹೊರಗೆ ?
ಮರುಗದಾ ಅದಾವ ದೊರೆಯಾದೊಡೆ ಬೇಕೆ ಜಗಕ್ಕೆ ?

ಕೇರಿ ಹೊಲೆಯನಲು ಹೊಲೆಯನಾ ಹರಯಾರು ?
ಒಳ್ಳೆಯವರು ನಾವೆನಲು ನಮ್ಮನುದಿಸಿದವನಾರು ?
ಅವನಿಗಾರು ? ಎಮಗಾರು? ದೇವನೋ ನೂರಾರು ?
ಅರಿಯುವಾ ಮರೆಯದೇ ನಾವೆಲ ಮಾನವರು

# 'ಸೌಂದರ್ಯ ಸ್ವರ್ಗ'

ಹಾರುತಿದೆ ನೋಡಿಲ್ಲಿ "**ಸೌಂದರ್ಯಸ್ವರ್ಗ** !"
ಹುಲ್ಲ ಮರೆಯಲ್ಲಿ, ಬೇಲಿ ಬದಿಯಲ್ಲಿ; ಮಿಣುಕುತಿದೆ
ಆಕಾರ ಬಲು ಕಿರಿದು. ಜೀವ ಸ್ವರ್ಗ !
ನಲಿಯುತಾ ನೆಗೆಯುತಾ ಚಲುವು ಹಾರುತಿದೆ

ಕ್ಷಣವಿಲ್ಲಿ ಕ್ಷಣವಲ್ಲಿ; ಮಿಂಚುವೇಗ !
ಮುಳ್ಳು ರಾಶಿಯಲಿ, ಕಳ್ಳಿ ಕಂಟಿಯಲಿ ಕಿಲು-ಕುಲು
ಪುಟು ಪುಟನೆ ನೆಗೆಯುತಿದೆ ಬೇಗ
ಕಿರಿಯ ಪಕ್ಕಕೆ ಹೊಚ್ಚಿಹುದು ಚಲ್ವ ವರ್ಣ ಶಾಲು

ಎಳೆಕರುಳಿನಿಂ ಮನ ಸೆಳೆಯುತಿದೆ
ಕಿರಿ ಚಂಚು ಮುಂಬದಿಗೆ; ಗರಿಬಾಲ ಹಿಂಬದಿಗೆ
ಪಂಚಬಾಣನ ಬಿಲ್ ಮಣಿಯುತಿದೆ
ಕಂಠದಿಂಚರವ ತುಂಬುತಿದೆ ಪೊದೆಯ ಬದಿಗೆ

ಉಲಿಯುತಿದೆ ಆ ರಸ ಜೀವನವು
ಲತೆಯ ಮಂಟಪವೇರಿ ಉಯ್ಯಾಲೆಯಾಡುತಿದೆ
ನಿಲ್ಲದೆಯೆ ಆಡುತಿದೆ ಸರಸ ಚಲ್ವವು
ಕಮಲದೇಟಿಗೆ ಹಾರಿ ಹೂವ ಪುಳುಕಿಸುತಿದೆ

ಹಿಡಿಯಲಸದಳವು ಕಿರಿಯ ಹೃದಯ
ನಯನ ಓಟಕೂ ಮಿಗಿಲಾದ ಓಟವಿದಕೇನು ?
ಸರ್ಗವನು ಕಂಟಿಗೆಳೆದ ಲಲಿತ ಮಾಯ
ಓಲಾಡುತಿದೆ, ಚಲ್ಲಾಡುತಿದೆ ಜೀವ"**ಸೌಂದರ್ಯ ಸ್ವರ್ಗ**"ವೇನು?



---

ಕರುಳರಳಿ ಕುಸುಮವಾಗಿ, ಶೂಲಧರಗೆ ಇರುವಾಗಿ
ಮನನೆನೆದು ನುಣ್ಣಾಗಿ, ಭವಹರಗೆ ನೆಲೆಯಾಗಿ
ವಿನಯಜೀವನವಾಗಿ, ವಿಷಯದಾಳಿಗೆ ದೂರಾಗಿ
ಅಕ್ಷಯದ ಅರಮನೆಗೆ ಬಾ ಸತ್ಯದರಗಿಳಿಯಾಗಿ

ಗು. ಹು. ಹನ್ನೆಂಡಿ